ಗೀತಾಕುಸುಮಮಂಜರಿ ಗ್ರಂಥಮಾಲೆ, ಗ್ರಂಥ ೩

# ಗೀತಾಪರಿಮಳ

ಗ್ರಂಥಕರ್ತರು ಮತ್ತು ಪ್ರಕಾಶಕರು

**ಆಲೂರ ವೆಂಕಟರಾಯರು,**

ಬಿ. ಎ., ಎಲ್ ಎಲ್. ಬಿ.,

**ಧಾರವಾಡ**

**೧೫-೦೨-೨೬]** **[ಬೆಲೆ ೧-೪-೦**

ಶ್ರೀ

**ಗೀತಾಕುಸುಮಮಂಜರಿ ಗ್ರಂಥಮಾಲೆ, ಧಾರವಾಡ**

# ಸಹೃದಯರಿಗೆ ಬಿನ್ನಹ

ಮಹನೀಯರೆ,

ಶ್ರೀ, ಆಲೂರ ವೆಂಕಟರಾಯರ ಹೆಸರು ಕೇಳದ ಕನ್ನಡಿಗನಿಲ್ಲ. ಅವರು ಈಗ ಮೂವತ್ತೆರಡು ವರ್ಷಗಳಿಂದ ಮೇಲ್ಪಟ್ಟು ಸತತವಾಗಿ ಮಾಡಿದ ದೇಶಸೇವೆ, ಭಾಷಾಸೇವೆಗಳು ಸರ್ವರಿಗೂ ಗೊತ್ತೇ ಇವೆ. ಈ ಅವಧಿಯಲ್ಲಿ ಕರ್ನಾಟಕದಲ್ಲಿ ಆದ ಪ್ರತಿಯೊಂದು ಚಳವಳಿಯ- ಅದು ಭಾಷಾವಿಷಯಕವೇ ಇರಲಿ, ಐತಿಹಾಸಿಕವೇ ಇರಲಿ, ರಾಜಕಾರಣವೇ ಇರಲಿ, ಧಾರ್ಮಿಕವೇ ಇರಲಿ- ಜನಕರು ಅವರು. ಅವರ ದೇಶಸೇವೆಯ ಮತ್ತೊಂದು ವಿಶೇಷವೇನೆಂದರೆ, ಅವರು ಇಂದಿನವರೆಗೆ ಯಾವ ಸಾರ್ವಜನಿಕ ನಿಧಿಯಮೇಲೆಯೂ ಅವಲಂಬಿಸದೆ, ಶ್ರೀಮಂತರಲ್ಲದಿದ್ದರೂ ಸಾವಿರಾರು ರೂಪಾಯಿಗಳನ್ನು ಸಾಲಮಾಡಿಯಾದರೂ ಸ್ವಂತ ಕೈಯಿಂದ ವೆಚ್ಚಮಾಡಿ ತಮ್ಮ ಯಾವತ್ತೂ ದೇಶಸೇವೆಯನ್ನು ನಡಿಸಿರುವರು. ಹಿರಿಯರಾದ ಅವರ ಪರಿಚಯವನ್ನು ಕನ್ನಡಿಗರಿಗೆ ಮಾಡಿಕೊಡುವದು ನಮ್ಮಂಥವರಿಗೆ ಉಚಿತವಾಗಲಾರದಾದುದರಿಂದ ನಾವು ಅವರ ಪರಿಚಯವನ್ನು ಮಾಡಿಕೊಡುವ ಉದ್ದೇಶದಿಂದ ಈ ಬಿನ್ನಹವನ್ನು ತೆಗೆದಿರುವದಿಲ್ಲ.

ಆದರೆ ಈಗ ಅವರು ಕೈಕೊಂಡಿರುವ ಮತ್ತೊಂದು ಘನವಾದ ಕಾರ್ಯದ ಪರಿಚಯವನ್ನು ಮಾಡಿಕೊಡುವುದಕ್ಕೋಸ್ಕರ ಈ ಪ್ರಕಟನೆಯನ್ನು ತೆಗೆದಿರುವೆವು. ಅದೇನೆಂದರೆ, ಅವರ ಗೀತಾ ಕುಸುಮಮಂಜರಿ ಗ್ರಂಥಮಾಲೆಯ ವಿಷಯವು. ಅವರು ೨೦-೨೫ ವರ್ಷಗಳ ಹಿಂದೆಯೇ ಸದ್ದಿಲ್ಲದೆ ಶಾಂತವಾಗಿ ಗೀತೆಯ ವಿಶೇಷ ಅಭ್ಯಾಸವನ್ನು ಮಾಡಿದ್ದರು. ಅದು ಲೋಕಮಾನ್ಯ ಟಿಳಕರವರ ಕಿವಿಗೆ ೧೯೧೮ರಲ್ಲಿಯೇ ಮುಟ್ಟಿ, ಲೋಕಮಾನ್ಯರು ಅವರಿಗೆ ತಮ್ಮ ಅಲೌಕಿಕ ಗ್ರಂಥವಾದ ಗೀತಾರಹಸ್ಯವನ್ನು ಭಾಷಾಂತರಿಸಲಿಕ್ಕೆ ವಿಜ್ಞಾಪಿಸಿಕೊಂಡ ಮೇರೆಗೆ ಶ್ರೀ. ವೆಂಕಟರಾಯರು ಅದನ್ನು ಮಾಡಿಕೊಟ್ಟರು. ಲೋಕಮಾನ್ಯರು ಸ್ವಂತ ವೆಚ್ಚದಿಂದ ಅದನ್ನು ಮುದ್ರಿಸಿರುವದು ಸರ್ವಶ್ರುತವೇ ಅದೆ. ಆದರೆ ಗೀತೆಯ ವಿಷಯವಾಗಿ ಶ್ರೀ. ವೆಂಕಟರಾಯರಿಗೆ

ಸ್ವತಂತ್ರವಾಗಿ ಗ್ರಂಥಗಳನ್ನು ಬರೆಯಲು ಇಲ್ಲಿಯವರೆಗೆ ಅವಕಾಶದೊರೆತಿರಲಿಲ್ಲ. ಕೆಲವು ವರ್ಷಗಳ ಹಿಂದೆ, ಸರಕಾರದವರು ಅವರನ್ನು ಆರ್ಡಿನನ್ನ ಕೆಳಗೆ ಒಂದು ಹಳ್ಳಿಯಲ್ಲಿ ನಿರ್ಬಂಧದಲ್ಲಿ ಇಟ್ಟಾಗ, ಅನಾಯಾಸವಾಗಿ ಅವರಿಗೆ ಆ ತರಹದ ಸುಸಂಧಿ ದೊರೆಯಿತು. ಈಗ ಅವರು ಗೀತೆಯ ವಿಷಯವಾಗಿ ಸುಮಾರು ೨೫೦೦-೩೦೦೦ ಪುಟಗಳಾಗುವಷ್ಟು ಗ್ರಂಥಗಳನ್ನು ಬರೆದಿರುವರು; ಮತ್ತು ತಮ್ಮ ಸ್ವಭಾವದಂತೆ, ಕಷ್ಟ ಪಟ್ಟು ಕೈಯಿಂದ ಹಣಹಾಕಿ ಈಗಾಗಲೇ ಮೂರು ಗ್ರಂಥಗಳನ್ನು ಮುದ್ರಿಸಿರುವರು. ಅವರು ಬರೆದಿರುವ ಗ್ರಂಥಗಳು ಕನ್ನಡ ಭಾಷೆಯಲ್ಲಿ ಅಪೂರ್ವವಾದವುಗಳೆಂದು ಯಾರಿಗೂ ಬೇರೆ ಹೇಳುವ ಕಾರಣವಿಲ್ಲ. ಆದಕಾರಣ ಅವರ ಕೈಗಳು ನಿಂತ ಈ ಹೊತ್ತಿನಲ್ಲಿ ಅವರ ಗ್ರಂಥಗಳ ಮುದ್ರಣವು ತೀವ್ರವಾಗುವಂತೆ ಮಾಡುವದು ಕನ್ನಡಿಗರ ಕರ್ತವ್ಯವಲ್ಲವೇ ?

ಈಗ ನಾವು ಕನ್ನಡಿಗರೆಲ್ಲರಿಗೂ ಬಿನ್ನವಿಸಿಕೊಳ್ಳುವುದೇನೆಂದರೆ, ಅವರು ಅವರವರ ಯೋಗ್ಯತೆಯ ಮೇರೆಗೆ ಪೋಷಕರಾಗಿಯಾಗಲಿ ಚಂದಾದಾರರಾಗಿಯಾಗಲಿ ನೆರವಾಗಬೇಕು. ಕೊನೆಗೆ ಅವರ ಪುಸ್ತಕಗಳು ಹೊರಟಂತೆ ಅವುಗಳನ್ನು ಕೊಳ್ಳುತ್ತೇವೆಂದು ಆವರಿಗೆ ತಿಳಿಸಿ ಆಶ್ವಾಸನ ಕೊಟ್ಟು, ಅವಗಳನ್ನು ಕೊಳ್ಳುತ್ತ ಹೋದರೂ ಸಾಕು.

ಆದಕಾರಣ, ಕರ್ನಾಟಕ ವಾಙ್ಮಯಕ್ಕೆ ಭೂಷಣವಾಗಿರುವ ಈ ಗ್ರಂಥಗಳನ್ನು ಪ್ರತಿಯೊಬ್ಬ ಕನ್ನಡಿಗನೂ ಪ್ರತಿಯೊಂದು ವಾಚನಾಲಯವೂ ಅಭಿಮಾನದಿಂದ ಕೊಂಡುಕೊಳ್ಳುವದೆಂದು ಆಶಿಸುತ್ತೇವೆ.

ತಮ್ಮವರಾದ,

ವಾಳವೇಕರ ಗುರುರಾಯ, ಎಲ್ ಎಲ್. ಬಿ.

ಛಬ್ಬಿ ಕೇಶವರಾಯ, ಬಿ. ಎ.,

ಛಬ್ಬಿ ಹಣಮಂತರಾಯ, ಬಿ. ಎ.,

ಕೊಪ್ಪ ಶ್ರೀನಿವಾಸರಾಯ, ಬಿ. ಎ.,

ಮು. ದೇಸಾಯಿ ರಾಘವೇಂದ್ರರಾಯ, ಎಂ. ಎಜಿ.

ತಟ್ಟಿ ಶಾಮರಾಯ, ಬಿ. ಎ.,

ಮುದವೀಡು ವೆಂಕಟರಾಯ, ವಕೀಲ.

ಮಂಗಳವೇಢ ಶ್ರೀನಿವಾಸರಾಯ, 'ಕನ್ನಡಿಗ'

**ಅ. ವೆ. ಸಹಿತ ಚಂದಾದಾರರಿಗೆ ೪-೮-೦ ಪೋಷಕರಿಗೆ ೧೦-೦-೦**

# ಗೀತಾಕುಸುಮಮಂಜರಿ, ಗ್ರಂಥಮಾಲೆ

ವರ್ಷದಲ್ಲಿ ೬೦೦ ಪುಟ ] ಉದ್ದೇಶ ಪತ್ರಿಕೆ [ ೧೫೦ ಪುಟಗಳ ನಾಲ್ಕು ಗ್ರಂಥಗಳು

ಗ್ರಂಥಕರ್ತರು:- **ಆಲೂರ ವೆಂಕಟರಾಯರು, ಧಾರವಾಡ**

ಇದೊಂದು ನಾವು, ಗೀತಾದೇವಿಯ ಗರ್ಭಗುಡಿಯಲ್ಲಿ ಇಡಬೇಕೆಂದಿರುವ ನಂದಾ(ನೊಂದದ) ದೀಪವು. ಗೀತಾದೇವಿಯ ಮುಂದೆ ಪುರಾತನ ಕಾಲದಿಂದಲೂ ನೂರಾರು ಪಂಡಿತರು ಅನೇಕ ನಂದಾದೀಪಗಳನ್ನು ಹಚ್ಚಿಟ್ಟಿರಲು ನಮ್ಮೀ ಮಿಣಿಮಿಣಿ ಉರಿಯುವ ದೀಪದ ಆವಶ್ಯಕತೆಯೇನೆಂದು ಕೇಳಬಹುದು. ನಂದಾದೀಪವನ್ನಿಡುವುದು ಮುಖ್ಯತಃ ನಮಗೆ ಪುಣ್ಯ ಒದಗಲಿ ಎಂದು. ನಮ್ಮ ಹೃದಯದಲ್ಲಿ- ದೇವರ ಮೂರ್ತಿಯ ಮೇಲಲ್ಲ- ಕೆಲಮಟ್ಟಿಗೆ ಪ್ರಕಾಶ ಬೀಳಲಿ ಎಂದು. ಆನುಷಂಗಿಕವಾಗಿ ದೇವಿಯ ಮೂರ್ತಿಯ ಮೇಲೆ ತುಸು ಬೆಳಕು ಬಿದ್ದರೂ ಬೀಳಲಿ.

ಈ ಗ್ರಂಥಗಳನ್ನು ಬರೆಯುವುದರಲ್ಲಿ ನಮ್ಮ ಉದ್ದೇಶವು ಗೀತೆಗೆ ತೀರ ಹೊಸದೊಂದು ಅರ್ಥವನ್ನು ಹಚ್ಚುವುದಿರುವುದಿಲ್ಲವೆಂಬುದನ್ನು ನಾವು ಮುಂಚೆ ಸ್ಪಷ್ಟವಾಗಿ ಹೇಳಿಬಿಡುತ್ತೇವೆ. ಪ್ರತಿಯೊಬ್ಬನಿಗೆ ನವೀನವಾಗಿ ವಿಚಾರಮಾಡುವುದಕ್ಕೆ ಸ್ವಾತಂತ್ರ್ಯವೇನೋ ಇದ್ದೇ ಇರುತ್ತದೆ. ಹಾಗೆ ಆತನು ಮಾಡಲೂ ಬೇಕು. ಆದರೆ ಸ್ವಾತಂತ್ರವು ಬೇರೆ, ಅಧಿಕಾರವು ಬೇರೆ. ಅನೇಕ ಶಾಸ್ತ್ರಗಳನ್ನೋದಿ ಶ್ರೀಮದ್ಭಗವದ್ಗೀತೆಯನ್ನು ಅನೇಕ ತಪಗಳವರೆಗೆ ಅಭ್ಯಾಸಮಾಡಿದರೂ ಆ ತರಸದ ಅಧಿಕಾರವು ಪೂರ್ವಜನ್ಮದ ಪುಣ್ಯವಿಲ್ಲದೆ ಪ್ರಾಪ್ತವಾಗಲಾರದು ಅಂದಬಳಿಕ ಕೇವಲ ಸ್ವಂತ ಮನಸ್ಸಿನ ಸಮಾಧಾನಕ್ಕೋಸ್ಕರ ಅನೇಕ ವರ್ಷಗಳಿಂದ ಅಭ್ಯಾಸಮಾಡುತ್ತ ಬಂದಿದ್ದರೂ ಇನ್ನೂವರೆಗೆ ತೃಪ್ತಿಹೊಂದದ ನಮ್ಮಂಥ ಪಾಮರರಿಗೆ, ಹಾಗೆ ತೀರ ಸ್ವತಂತ್ರವಾದ ಗ್ರಂಥವನ್ನು ಬರೆಯುವ ಅಧಿಕಾರವೆಲ್ಲಿ? ಶ್ರೀಶಂಕರ ರಾಮಾನುಜ ಮಧ್ವ ಮುಂತಾದವರ ಮತ್ತು ಆಧುನಿಕ ಪಂಡಿತರ- ವಿಶೇಷತಃ ಶ್ರೀಮಧ್ವಾಚಾರ್ಯರ ಗ್ರಂಥಗಳನ್ನು ಮೂಲಾಧಾರವಾಗಿಟ್ಟುಕೊಂಡು ಈ ಗ್ರಂಥಗಳನ್ನು ಬರೆದಿರುವೆವು.

**ಆದರೆ, ನಮ್ಮ ವಿವೇಚನಾಪದ್ಧತಿಯಲ್ಲಿ ಬಲುಮಟ್ಟಿಗೆ ನಾವೀನ್ಯವಿದೆ, ರಚನಾಶೈಲಿಯಲ್ಲಿ ವೈಶಿಷ್ಟ್ಯವಿದೆ.** ಪಾಂಡಿತ್ಯ ಪ್ರದರ್ಶನವೂ ನಮ್ಮ ಉದ್ದೇಶವಲ್ಲ, ಅಥವಾ ಪಾಮರರಂಜನವೂ ನಮ್ಮ ಉದ್ದೇಶವಲ್ಲ. ವಿವಿಧ ದೃಷ್ಟಿಯಿಂದ ಗ್ರಂಥಗಳನ್ನು ಬರೆದು ಗೀತಾರಸವನ್ನು ಪಾನಮಾಡಿಸುವುದೇ

ನಮ್ಮ ಉದ್ದೇಶ. 'ಸಂಕ್ಷೇಪ ವಿಸ್ತರಾಭ್ಯಾಂ ಪ್ರವದಂತಿ ಮನೀಷಿಣಃ' ಎಂಬಂತೆ ನಾವು ಗೀತೆಯ ವಿಷಯವಾಗಿ ಮುಂಚೆ ಸಂಕ್ಷೇಪದಿಂದ ಹೇಳಿ, ವಾಚಕರಿಗೆ ತಿಳಿದುಕೊಳ್ಳುವ ಕುತೂಹಲವು ಹೆಚ್ಚಾಗುತ್ತ ಹೋದಂತೆ ಹೊಸ ವಿಷಯಗಳನ್ನೊಳಗೊಂಡ ಗ್ರಂಥಗಳನ್ನು ಬರೆದಿರುವೆವು. ಇದರಿಂದ, ಇವು ಭಿನ್ನ ಭಿನ್ನ ತರಗತಿಯ, ಭಿನ್ನ ಭಿನ್ನ ಅಭಿರುಚಿಯ ಮತ್ತು ಭಿನ್ನ ಭಿನ್ನ ಪಂಥಗಳ ಜನರಿಗೆಲ್ಲರಿಗೂ ಉಪಯುಕ್ತವಾಗದೆ ಇರವು.

ಈ ಗ್ರಂಥಮಾಲೆಯಲ್ಲಿ ಗೀತಾಪ್ರಕಾಶ (ಮುದ್ರಿತವಾಗಿದೆ) ಗೀತಾ ಸಂದೇಶ (ಮುದ್ರಿತವಾಗಿದೆ) ಗೀತಾಪರಿಮಳ (ಮುದ್ರಿತವಾಗಿದೆ) ಗೀತಾ ಭಾವಪ್ರದೀಪ, ಗೀತಾರ್ಥಸಂಗ್ರಹ, ಗೀತಾವಿಸ್ತಾರ, ತುಲನಾತ್ಮಕ ಅಭ್ಯಾಸ ಮುಂತಾದ ಅನೇಕ ಗ್ರಂಥಗಳು ಪ್ರಕಟವಾಗುವವು.

ಇವೆಲ್ಲ ಗ್ರಂಥಗಳು ಬಹುಶಃ ಹೊಳವು ಹಾಕಲ್ಪಟ್ಟು ಸಿದ್ಧವಾಗಿವೆ. ತೀಡಿ ಹೊಳಪುಕೊಡುವ ಕೆಲಸವಷ್ಟೆ ಉಳಿದಿದೆ. ನಮ್ಮಲ್ಲಿ ಹಣದ ಶಕ್ತಿಯಿದ್ದರೆ, ಇವೆಲ್ಲವನ್ನೂ ಒಮ್ಮೆಲೆ ಮುದ್ರಿಸಬಹುದಾಗಿತ್ತು. ಅದರ ಅಭಾವದ ಮೂಲಕವೇ ಅವುಗಳಿಗೆ ಈ ಗ್ರಂಥಮಾಲೆಯ ರೂಪ. ಈ ಗ್ರಂಥಮಾಲೆಯನ್ನು ನಮ್ಮಿಂದ ೪-೫ ವರ್ಷಗಳಲ್ಲಿ ಪೂರ್ಣ ಮಾಡಿಸಿಕೊಳ್ಳುವುದು ಬಿಡುವುದು, ಇನ್ನು ಕನ್ನಡಿಗರ ಉದಾರಾಶ್ರಯವನ್ನೇ ಅವಲಂಬಿಸಿದೆ.

ನವರಾತ್ರಿಯಲ್ಲಿ ದೇವರಿಗೆ ವಿವಿಧ ರೂಪಗಳನ್ನು ಕೊಟ್ಟು ಭಕ್ತನು ಆನಂದಪಡುವಂತೆ, ನಮಗೂ, ಗೀತಾದೇವಿಗೆ ವಿವಿಧರೂಪಗಳನ್ನು ಕೊಟ್ಟು ಆನಂದಪಡುವುದಕ್ಕೆ ಅವಕಾಶವನ್ನು ಕೊಟ್ಟು ತಾವೂ ಪುಣ್ಯಭಾಗಿಗಳಾಗಬೇಕೆಂದು ಕನ್ನಡಿಗರಿಗೆ ನಮ್ಮ ಪ್ರಾರ್ಥನೆ.

ಗೀತಾಭವನ, ಧಾರವಾಡ **ಆಲೂರ ವೆಂಕಟರಾಯರು**

**೧೫-೦೨-೧೯೩೬**

**ಗೀತಾಕುಸುಮಮಂಜರಿ ಗ್ರಂಥಮಾಲೆ, ಧಾರವಾಡ**

**ಪ್ರಕಟನೆ**

**ಪುಟ ೬೨೦ ೬೫೦]** **ಗ್ರಂಥ ೧** **[ಬೆಲೆ ೨-೦-೦**

# ಗೀತಾಪ್ರಕಾಶ

**( ಕಿರಿಹೊತ್ತಿಗೆ )**

ಇದು ಕನ್ನಡ ವಾಙ್ಮಯದಲ್ಲಿ ಮಾತ್ರವೇ ಅಲ್ಲ, ಹಿಂದುಸ್ಥಾನದ ಮಿಕ್ಕ ವಾಙ್ಮಯಗಳಲ್ಲಿಯೂ ಅಪೂರ್ವವಾದ ಗ್ರಂಥ. ಇದರಲ್ಲಿ ಗೀತೆಯ ಸಂಬಂಧವಾಗಿ ತಿಳಿಯಬೇಕಾದ ವಿಷಯಗಳೆಲ್ಲವೂ ಬಂದಿವೆ. ಪ್ರತಿಯೊಬ್ಬನೂ ಜೇಬಿನಲ್ಲಿ ಇಟ್ಟುಕೊಂಡು ಓದಬಹುದು.

ಸಣ್ಣ ಅಕ್ಷರಗಳಲ್ಲಿ ೬೨೦ ಪುಟಗಳನ್ನು ಮುದ್ರಿಸಿ, ಎಷ್ಟು ಹೆಚ್ಚಿಗೆ ವಿಷಯಗಳನ್ನು ಸೇರಿಸಲಿಕ್ಕೆ ಬರುವದೋ ಅಷ್ಟೆಲ್ಲವನ್ನೂ ಸೇರಿಸಲಾಗಿದೆ. ವಿಸ್ತಾರವಾದ ಪ್ರಸ್ತಾವನೆ, ಹಿಂದಿನ ಕಥೆ, ಅಧ್ಯಾಯಗಳಲ್ಲಿ ಒಳಪ್ರಕರಣಗಳು, ಗೀತೆಯ ವಿಷಯಗಳು ಚಟ್ಟನೆ ತಿಳಿಯುವಂತೆ ಪ್ರತಿಯೊಂದು ಶ್ಲೋಕಾರ್ಥದಲ್ಲಿ ಟೀಕೆಟಿಪ್ಪಣಿಗಳನ್ನು ಸೇರಿಸಿ ಪ್ರತಿಯೊಂದು ಅಧ್ಯಾಯದ ಸಾರವು ಕೊಡಲ್ಪಟ್ಟಿದ್ದು, ಶಂಕರ, ರಾಮಾನುಜ, ಮಧ್ವ, ಟಿಳಕ, ಅರವಿಂದ, ಗಾಂಧಿ ಇವರ ಗೀತಾಮತಗಳು, ಮತ್ತು ಅವರಲ್ಲಿ ಮತ್ಯೈಕ್ಯತೆಯು, ಮೂಲ ಗೀತೆ, ಶ್ಲೋಕಾನುಕ್ರಮಣಿಕೆ ಇವೆಲ್ಲವೂ ಬಂದಿವೆ.

ಇಷ್ಟೊಂದು ವಿಷಯಗಳನ್ನೊಳಗೊಂಡ ಗೀತಾ ಪುಸ್ತಕವು ಇಷ್ಟು ಅಗ್ಗ ಬೆಲೆಯಲ್ಲಿ ಯಾವುದೂ ದೊರೆಯಲಾರದು.

**ಗ್ರಂಥ ೨**

**ಕ್ರೌವುನ ಪುಟ ೧೪೮ ]** ## ಗೀತಾಸಂದೇಶ **[ಬೆಲೆ ೧-೪-೦**

( ಮೈಸೂರು ಸರಕಾರದವರಿಂದ ಮಂಜೂರಾದ ಗ್ರಂಥ )

ಇದು ಮತ್ತೊಂದು ಅಪೂರ್ವವಾದ ಗ್ರಂಥ. ಇದರಲ್ಲಿ ಸಮಗ್ರ ಗೀತೆಯ ಸಾರವು ಅಥವಾ ಸಂದೇಶವು ಒಂದೇ ವಾಕ್ಯದಲ್ಲಿ ಕೊಡಲ್ಪಟ್ಟು, ಅದನ್ನು ೧೪೮ ಪುಟಗಳವರೆಗೆ ಬೆಳಿಸಲಾಗಿದೆ. ಓದಲಿಕ್ಕೆ ಅತ್ಯಂತ ಮಧುರವಾದ ಗ್ರಂಥ, ನಡುನಡುವೆ, ದಾಸರ ಪದಗಳು ಶರಣರ ವಚನಗಳು ಮುಂತಾದವುಗಳನ್ನು ಕೊಟ್ಟು, ಗ್ರಂಥವನ್ನು ಬಲು ರುಚಿಕಟ್ಟಾಗಿ ಮಾಡಿದೆ.

ಗ್ರಂಥ ೩

ಕ್ರೌ. ಪುಟ ೧ ] ## ಗೀತಾಪರಿಮಳ [ ಬೆಲೆ ೧-೪-೦

ಗೀತೆಯ ಶ್ಲೋಕಗಳನ್ನು ಇದ್ದಕ್ಕಿದ್ದಂತೆ ಓದಿದರೆ ಅದರ ಗುಟ್ಟು ಚೆನ್ನಾಗಿ ತಿಳಿಯುವುದಿಲ್ಲ. ಆದಕಾರಣ, ಯಾವತ್ತು ಅಧ್ಯಾಯಗಳ ಸುಗಂಧವನ್ನು ತೆಗೆದು ಈ ಗ್ರಂಥದಲ್ಲಿ ಕೊಡಲ್ಪಟ್ಟಿದೆ. ರಣಕೋಲಾಹಲ ಮನಕೋಲಾಹಲ, ಹೇಗೆ ಕೊಲ್ಲಲಿ!, ಈ ವಿಷಾದಕ್ಕೂ ನಮಗೂ ಸಂಬಂಧವೇನು ? ಶ್ರೀಕೃಷ್ಣನ ಉತ್ತರದ ದಿಗ್ದರ್ಶನ, ಮಹಾಭಾರತದ ಮಹತ್ವ ಮತ್ತು ಅದರಲ್ಲಿ ಗೀತೆಯ ಸ್ಥಾನ-ಮುಂತಾದ ಪ್ರಕರಣಗಳು ಸ್ವತಂತ್ರವಾಗಿಯೂ ಹೊಸಪದ್ಧತಿಯಿಂದಲೂ ಬರೆಯಲ್ಪಟ್ಟಿವೆ. ಮುಂದೆ ಹದಿನೆಂಟೂ ಅಧ್ಯಾಯಗಳ ತಾತ್ಪರ್ಯವು ಸುಲಭವಾಗಿ ತಿಳಿಯುವಂತೆ ಕೊಡಲ್ಪಟ್ಟಿದೆ. ಗೀತೆಯ ಮೇಲೆ ಈ ಮಾದರಿಯ ಗ್ರಂಥವು ಕನ್ನಡದಲ್ಲಿ ಮತ್ತೊಂದಿಲ್ಲವೆಂಬುದು ಇದನ್ನು ಓದಿ ನೋಡಿದರೆ ಮನವರಿಕೆಯಾಗುವುದು.

ಧಾರವಾಡ, ಗೀತಾಭವನ                    ಆಲೂರ ವೆಂಕಟರಾಯರು

೧೫-೧೨-೩೬

**ಟೀಪು**:- ಈ ಗ್ರಂಥಮಾಲೆಯ ಯಾವುದೇ ಎರಡು ಗ್ರಂಥಗಳನ್ನು ಕೊಳ್ಳುವ ಪ್ರತಿಯೊಬ್ಬರಿಗೂ ೧೦೦ಕ್ಕೆ ೧೫ರಷ್ಟು ಕಡಿಮೆ ಬೆಲೆ ಬೀಳುವುದು.

# ಗ್ರಂಥಪರಿಚಯ

ಇದು ಗೀತಾ ಕುಸುಮ ಮಂಜರಿ, ಗ್ರಂಥಮಾಲೆಯ ಮೂರನೆಯ ಗ್ರಂಥವು. ನಮ್ಮ ಉದ್ದೇಶದಂತೆ, ಇದರಲ್ಲಿ ಗೀತಾಸಂದೇಶದ ಮುಂದಿನ ವಿಷಯವು ಚರ್ಚಿಸಲ್ಪಟ್ಟಿದೆ. ಆ ಮುಂದಿನ ವಿಷಯವು ಯಾವುದೆಂದರೆ, ಗೀತೆಯ ಸಮಗ್ರ ಪರಿಮಳವನ್ನು ವಾಚಕರಿಗೆ ಅರ್ಪಿಸುವುದು.

ಗೀತೆಯ ಶ್ಲೋಕಗಳನ್ನು ಇದ್ದಕ್ಕಿದ್ದಂತೆಯೇ ಓದಿದರೆ, ಸಹಸಾ ಅದರ ಮರ್ಮವು ತಿಳಿಯುವುದಿಲ್ಲ. ಆದಕಾರಣ, ಇದರ ಹಿಂದಿನ ಗ್ರಂಥವಾದ ಗೀತಾಸಂದೇಶದಲ್ಲಿ ನಾವು ಗೀತೆಯ ಗುಟ್ಟನ್ನು ಒಂದೇ ವಾಕ್ಯದಲ್ಲಿ ಕೊಟ್ಟು, ಅದನ್ನು ವಿಸ್ತರಿಸಿದೆವು. ಈ ಗ್ರಂಥದಲ್ಲಿ, ಅದರ ಮುಂದೆ ಹೆಜ್ಜೆಯಿಟ್ಟು, ಗೀತೆಯೆಂಬ ಹೂಗೊಂಚಲಿನ ಪರಿಮಳವನ್ನು ತೆಗೆದು ವಾಚಕರಿಗೆ ಅರ್ಪಿಸಿದ್ದೇವೆ. ರಣಕೋಲಾಹಲ- ಮನಕೋಲಾಹಲ, ಹೇಗೆ ಕೊಲ್ಲಲಿ? ಈ ವಿಷಾದಕ್ಕೂ ನಮಗೂ ಸಂಬಂಧವೇನು? ಶ್ರೀಕೃಷ್ಣನ ಉತ್ತರದ ದಿಗ್ದರ್ಶನ, ಮಹಾಭಾರತದ ಮಹತ್ವ ಮತ್ತು ಅದರಲ್ಲಿ ಗೀತೆಯ ಸ್ಥಾನ ಇವೇ ಮುಂತಾದ ಪ್ರಕರಣಗಳು ಸ್ವತಂತ್ರವಾಗಿಯೂ ತೀರ ಹೊಸಪದ್ಧತಿಯಿಂದಲೂ ಬರೆಯಲ್ಪಟ್ಟವುಗಳು. ಮುಂದೆ, ಹದಿನೆಂಟೂ ಅಧ್ಯಾಯಗಳ ತಾತ್ಪರ್ಯವು ಅಧ್ಯಾಯ ಕ್ರಮದಲ್ಲಿಯೇ ಸಂಕ್ಷೇಪವಾಗಿಯೂ ಸುಲಭವಾಗಿಯೂ ಕೊಡಲ್ಪಟ್ಟಿದೆ. ಗೀತಾಸಂದೇಶದಲ್ಲಿರುವಂತೆ, ಇದರಲ್ಲಾದರೂ ದಾಸರ ಪದಗಳು, ಶರಣರ ವಚನಗಳು ಭರತೇಶವೈಭವದ ಅವತರಣಿಕೆಗಳು ಇವುಗಳಿಂದ ವಿಷಯಗಳನ್ನು ಕೆಲಮಟ್ಟಿಗೆ ಪುಷ್ಟೀಕರಿಸಿದ್ದೇವೆ. ಅಂತು, ಗೀತೆಯ ತತ್ವಗಳನ್ನು ಎಷ್ಟು ತರಹದಿಂದ ತಿಳಿಸಿ ಹೇಳುವುದು ಶಕ್ಯವಿದೆಯೋ ಅಷ್ಟು ಮಾಡಲೆತ್ನಿಸಿದ್ದೇನೆ.

ಈ ಗ್ರಂಥಮುದ್ರಣಕ್ಕೆ ನಮ್ಮ ಪರಮಮಿತ್ರರಾದ ಶ್ರೀ ಗುರುರಾವ ಬೇವೂರ ಆಯ್. ಸಿ. ಎಸ್. ಡಾಯರೆಕ್ಟರ ಜನರಲ್ ಆಫ್ ಪೋಸ್ಟ ಆಫೀಸ ನ್ಯೂ ದಿಲ್ಲಿ ಇವರು ಹಣದ ಸಹಾಯವನ್ನು ಮಾಡದಿದ್ದರೆ ಇದು ಹೊರಡುವುದಕ್ಕೆ ಇನ್ನೂ ವಿಲಂಬವಾಗುತ್ತಿತ್ತು. ಇರಲಿ, ಈ ಗ್ರಂಥದ ಮುದ್ರಣವು ಪ್ರಾರಂಭವಾದ ಕೂಡಲೆ ನಮಗೆ ವಿಜಯನಗರ ಉತ್ಸವದ ನಿಧಿ ಸಂಗ್ರಹಕ್ಕೋಸ್ಕರ ಹೊರಗೆ ಹೋಗಬೇಕಾದಾಗ, ನಮ್ಮೀ ಮಾಲೆಗೆ ಪ್ರಥಮದಿಂದಲೂ ಪ್ರೋತ್ಸಾಹನಕೊಡುತ್ತ ಬಂದಿರುವ ನಮ್ಮ ಮಿತ್ರರಾದ ಶ್ರೀ. ತಟ್ಟಿ ಶಾಮರಾವ ಬಿ. ಎ. ಇವರು ಪ್ರೂಫ ಮುಂತಾದವುಗಳನ್ನು ನೋಡುವ ಭಾರವನ್ನು ಸಂತೋಷದಿಂದ ಸ್ವೀಕರಿಸಿದುದಕ್ಕಾಗಿ ನಾವು ಅವರಿಗೆ ಚಿರಋಣಿಯಾಗಿರುವೆವು. ಹಾಗೆಯೇ ಕರ್ನಾಟಕ ಪ್ರಿಂಟಿಂಗ ಪ್ರೆಸ್ಸಿನ ಶ್ರೀ ಜಠಾರ ಇವರು

ಕಲ್ಪನಾತೀತವಾದ ತ್ವರೆಯಿಂದ ಮುದ್ರಣವನ್ನು ಮುಗಿಸಿ, ಇಷ್ಟು ಸುಂದರವಾಗಿ ಇದನ್ನು ಮುದ್ರಿಸಿಕೊಟ್ಟಿದುದಕ್ಕಾಗಿ ನಾವು ಅವರ ಉಪಕಾರವನ್ನು ಸ್ಮರಿಸುತ್ತೇವೆ.

ಕೊನೆಗೆ ಕನ್ನಡಿಗರು ಈ ಗ್ರಂಥವನ್ನು ಬಲು ಬೇಗನೆ ಕೊಂಡು ಕೊಂಡು ಮುಂದಿನ ಗ್ರಂಥವಾದ "**ಗೀತಾಭಾವಪ್ರದೀಪ**"ವನ್ನು ಮುದ್ರಿಸಲಿಕ್ಕೆ ಹಣದ ಅನುಕೂಲತೆಯನ್ನು ಒದಗಿಸಿಕೊಡಬೇಕೆಂದು ಪ್ರಾರ್ಥಿಸುತ್ತೇವೆ. ನಾವು ಕೇವಲ ಕನ್ನಡಿಗರ ಉದಾರಾಶ್ರಯದ ಮೇಲೆ ಅವಲಂಬಿಸಿ ಈ ಗ್ರಂಥಮಾಲೆಯನ್ನು ಹೊರಡಿಸಿರುವೆನೆಂಬುದನ್ನು ಲಕ್ಷಕ್ಕೆ ತಂದು, ಪ್ರತಿಯೊಬ್ಬರೂ ತಮ್ಮ ಮುಖಾಂತರವಾಗಿ ಕೆಲವು ಪ್ರತಿಗಳನ್ನು ಖರ್ಚುಮಾಡುವರೆಂದು ಆಶಿಸುತ್ತೇವೆ.

ಧಾರವಾಡ,

೧೫-೧೨-೩೬

# ಅನುಕ್ರಮಣಿಕೆ

# ಗೀತಾಪರಿಮಳ

೧ನೆಯ ಪ್ರಕರಣ

## ರಣಕೋಲಾಹಲ-ಮನಕೋಲಾಹಲ

ಶ್ರೀಮದ್ಭಗವದ್ಗೀತೆಯಲ್ಲಿ, ಮೊದಲನೆಯ ಪರದೆಯು ಎತ್ತಲ್ಪಟ್ಟ ಕೂಡಲೆ, ನಮಗೆ ಯಾವ ನೋಟವು ಕಾಣುತ್ತದೆ, ನೋಡಿರಿ: ಕೌರವ ಪಾಂಡವ ಸೈನ್ಯಗಳು ಎರಡೂ ಮಗ್ಗಲಿಗೆ ಸಾಲಾಗಿ ನಿಂತಿವೆ. ಕೌರವ ಸೈನ್ಯದಲ್ಲಿ, ದ್ರೋಣ, ಭೀಷ್ಮ, ಕರ್ಣ, ಕೃಪ, ಅಶ್ವತ್ಥಾಮ, ವಿಕರ್ಣ, ಭೂರಿಶ್ರವ ಇವರೇ ಮುಂತಾದ ವೀರಾಧಿವೀರರು ದುರ್ಯೋಧನನ ಸಲುವಾಗಿ ಜೀವದ ಹಂಗುದೊರೆದು ಕಾದಲನುವಾಗಿದ್ದಾರೆ. ಪಾಂಡವ ಸೈನ್ಯದಲ್ಲಿ ಧೃಷ್ಟದ್ಯುಮ್ನ, ಯುಯುಧಾನ, ವಿರಾಟ, ದ್ರುಪದ, ಧೃಷ್ಟಕೇತು, ಚೇಕಿತಾನ, ಕಾಶೀರಾಜ, ಪುರುಜಿತ್, ಕುಂತೀಭೋಜ, ಶೈಬ್ಯ, ಯುಧಾಮನ್ಯು, ಉತ್ತಮೌಜ, ಅಭಿಮನ್ಯು ಇವರೇ ಮುಂತಾದ ಅತಿರಥಿ ಮಹಾರಥಿಗಳು ಪಾಂಡವರ ಪಕ್ಷವನ್ನು ವಹಿಸಿ, ರಣದಲ್ಲಿ ರುಂಡಗಳನ್ನಿಳುಹಲು ಸಿದ್ಧರಾಗಿ ಬಂದಿದ್ದಾರೆ. ಆ ಸಮಯದಲ್ಲಿ ದುರ್ಯೋಧನನು ಮುಂದೆ ಬಂದು, ಪಾಂಡವಸೈನ್ಯವನ್ನು ತುಸು ನಿರೀಕ್ಷಿಸುತ್ತಾನೆ. ಅಲ್ಲಿ ಕೂಡಿರುವ, ಭೀಮಾರ್ಜುನರಿಗೆ ಸಮರಾದ ಅನೇಕ ನರ ಪುಂಗವರನ್ನು ನೋಡಿ, ಕ್ಷಣಹೊತ್ತು, ಆತನ ಎದೆ ಕುಸಿಯುತ್ತದೆ. ಮತ್ತು ತನ್ನ ಸೈನ್ಯವು ಆ ಪ್ರಬಲವಾದ ಪಾಂಡವಸೈನ್ಯವನ್ನು ಗೆಲ್ಲಲು ಸಾಕಿಲ್ಲವೆಂಬ ಶಂಕೆಯು ಆತನ ಮನಸ್ಸನ್ನು ತಟ್ಟುತ್ತದೆ. ಆಗ ಆತನು ಸೇನಾಪತಿಗಳಾದ ಭೀಷ್ಮಾಚಾರ್ಯರನ್ನು ಎಲ್ಲ ಬದಿಯಿಂದಲೂ ಕಾಯುವುದಕ್ಕೆ ತನ್ನ ಸೈನ್ಯಕ್ಕೆ ಎಚ್ಚರಿಕೆ ಕೊಡುತ್ತಾನೆ. ಚಾಣಾಕ್ಷರಾದ ಭೀಷ್ಮಾಚಾರ್ಯರು, ಸೂಕ್ಷ್ಮದೃಷ್ಟಿಯಿಂದ, ದುರ್ಯೋಧನನ ಮನದ ಈ ದುಗುಡವನ್ನು ಕಂಡುಹಿಡಿದು, ಅದನ್ನು ಹೊಡೆದೋಡಿಸಿ, ಆತನನ್ನು ಹುರಿದುಂಬಿಸುವ ಸಲುವಾಗಿ, ಸಿಂಹನಾದವನ್ನು ಗೈದು ಶಂಖವನ್ನೂದುತ್ತಾರೆ. ಕೂಡಲೆ, ಕೌರವಸೈನ್ಯದಲ್ಲೆಲ್ಲ ಶಂಖಗಳೂ ಭೇರಿಗಳೂ, ಹಲಗೆಗಳೂ, ನಗಾರಿಗಳೂ, ಕಾಳಿಗಳೂ ಇವೇ ಮುಂತಾದ ವಾದ್ಯಗಳು ಮೊಳಗತೊಡಗುತ್ತವೆ. ಈ ಕೋಲಾಹಲವನ್ನು ಕಂಡು, ಇತ್ತ ಕೃಷ್ಣಾರ್ಜುನರೂ ತಮ್ಮ ತಮ್ಮ ಶಂಖಗಳನ್ನೂದುತ್ತಾರೆ. ಭೀಮ, ನಕುಲ, ಸಹದೇವಾದಿಗಳೂ ತಮ್ಮ ತಮ್ಮ ಶಂಖಗಳನ್ನೂದುತ್ತಾರೆ. ಅವುಗಳ ಘೋರವಾದ ಧ್ವನಿಯು ಕೌರವಸೈನ್ಯದ ಎದೆಯನ್ನು ಬಿರಿಯುತ್ತದೆ, ಮತ್ತು ಭೂಮ್ಯಾಕಾಶಗಳಲ್ಲೆಲ್ಲ ಇಡುಗುತ್ತದೆ.

ಹೀಗೆ, ಉಭಯಸೈನ್ಯಗಳಲ್ಲಿ ರಣಗರ್ಜನೆಯು ಎದ್ದಿದೆ. ಇನ್ನೊಂದು ಕ್ಷಣದಲ್ಲಿ, ಇಬ್ಬರಿಗೂ ಕೈಗೆಕೈ ಹತ್ತತಕ್ಕ ಸಮಯ. ಆಗ, ಅರ್ಜುನನ ಮನದಲ್ಲಿ, ತಾನು ಯಾರ ಸಂಗಡ ಯುದ್ಧ ಮಾಡಬೇಕಾಗಿರುವುದೋ ಆ ಕೌರವಸೈನ್ಯವನ್ನು ಕೊನೆಯಾವರ್ತಿ ಒಮ್ಮೆ ದಿಟ್ಟಿಸಿನೋಡುವ ಕುತೂಹಲವುಂಟಾಗುತ್ತದೆ. ಆದುದರಿಂದ ಆತನು ತನ್ನ ರಥವನ್ನು ಮುಂದಕ್ಕೆ ನೂಕಿಸಿ ಎರಡೂ ಸೈನ್ಯಗಳ ನಡುವೆ ನಿಲ್ಲಿಸಲು, ತನ್ನ ಸಾರಥಿಯಾದ ಕೃಷ್ಣನಿಗೆ ಹೇಳುತ್ತಾನೆ. ಆ ಮೇರೆಗೆ ಕೃಷ್ಣನು ರಥವನ್ನು ಭೀಷ್ಮ, ದ್ರೋಣ ಮುಂತಾದವರು ಅರ್ಜುನನ ಕಣ್ಣಿಗೆ ಕಾಣುವಂತೆ, ತಂದು ನಿಲ್ಲಿಸುತ್ತಾನೆ. ಅರ್ಜುನನು ಎಡಬಲಕ್ಕೆ ಹಿಂದುಮುಂದೆ ತನ್ನ ದೃಷ್ಟಿಯನ್ನು ಚೆಲ್ಲುತ್ತಾನೆ. ಆಗ, ಆತನಿಗೆ ಏನು ಕಾಣಿಸುತ್ತದೆ? ಆತನ ಕಣ್ಣಿಗೆ **ಶತ್ರುಗಳು** ಕಾಣಲೊಲ್ಲರು! ಆತನಿಗೆ ಎಲ್ಲಿ ನೋಡಿದಲ್ಲಿ, ತನ್ನ ಗುರುಗಳೂ ಅಜ್ಜಮುತ್ತಂದಿರೂ ಮಕ್ಕಳು ಮೊಮ್ಮಕ್ಕಳೂ ಬಂಧುಬಳಗದವರೂ ಗೆಳೆಯರು ಮಿತ್ರರೂ ಇವರೇ ಕಂಡರು! ಆ ದೃಶ್ಯವನ್ನು ಕಂಡು ಆತನ ಎದೆ ಭುಗಿಲೆನ್ನುತ್ತದೆ, ಕರಗಿ ನೀರಾಗುತ್ತದೆ, ದೇಹವೆಲ್ಲ ಥರಥರನೆ ನಡುಗುತ್ತದೆ, ಮೈಗೂದಲುಗಳೇಳುತ್ತವೆ, ಕೈಯೊಳಗಿನ ಬಾಣವು ಕಳಚಿ ಬೀಳಹತ್ತುತ್ತದೆ, ಮೈಯೆಲ್ಲ ಉರಿಯಲಾರಂಭಿಸುತ್ತದೆ, ಕೈಕಾಲುಗಳು ಕಂಪಿಸತೊಡಗಿ ಆತನು ತರಹರಿಸಿ, ನಿಲ್ಲದವನಾಗುತ್ತಾನೆ! ಆತನ ಮನವು ಮರುಗಿ ಕಳವಳಗೊಳ್ಳುತ್ತದೆ. ಆಗ ಆತನು ಶ್ರೀಕೃಷ್ಣನನ್ನು ಕುರಿತು "ಎಲೈ ಕೃಷ್ಣನೇ, ನನ್ನ ಅವಸ್ಥೆ ಯಾವ ಪರಿ ಆಗಿದೆ ನೋಡು, ವಿಪರೀತವಾದ ಶಕುನಗಳನ್ನೂ ಕಾಣುತ್ತಿರುವೆನು. ಯುದ್ಧ ಮಾಡಲು ಮನಸ್ಸಾಗಲೊಲ್ಲದು. ನಾವು ಕೊಲ್ಲಬೇಕೆಂದಿರುವ ಶತ್ರುಗಳೆಂದರೆ ಇವರೇ ಅಲ್ಲವೆ? ಇವರಾದರೋ ನಮ್ಮವರು. ಇಗೋ ಇವರು ಗುರುಗಳು, ಇವರು ಹಿರಿಯರು, ಇವರು ಚಿಗಪ್ಪಗಳು, ಇವರು ಮಕ್ಕಳು, ಇವರು ಮುತ್ತಂದಿರು, ಇವರು ಭಾವ ಮೈದುನರು, ಇವರು ಪರಮಬಾಂಧವರು. ಇವರೆಲ್ಲರನ್ನು ಕೊಂದುಗಳಿಸಿದ ಆ ವಿಜಯವೂ ಬೇಡ, ಆ ರಾಜ್ಯವೂ ಬೇಡ, ಆ ಸುಖಗಳೂ ಬೇಡ. ನಾವು ರಾಜ್ಯವನ್ನೂ ಭೋಗಗಳನ್ನೂ ಸುಖಗಳನ್ನೂ ಬಯಸುವುದು ಯಾರ ಸಲುವಾಗಿ? ಇವರ ಸಲುವಾಗಿಯೇ ಅಲ್ಲವೆ? ಇವರೇ ಸತ್ತು ಹೋದ ಬಳಿಕ ಆ ರಾಜ್ಯವನ್ನು ತೆಗೆದುಕೊಂಡು ಮಾಡುವುದೇನು? ಆ ಭೋಗಗಳನ್ನು ತೆಗೆದುಕೊಂಡು ಮಾಡುವುದೇನು? ಸ್ವಜನರನ್ನು ಕೊಂದು ಗಳಿಸಿದ ಆ ರಾಜ್ಯದಿಂದೇನು, ಆ ಧನದಿಂದೇನು? ಮೂರು ಲೋಕಗಳ ಒಡೆತನವು ದೊರೆಯುವಂತಿದ್ದರೂ ಕೂಡ ನಾನು ಅವರನ್ನು ಕೊಲ್ಲಲಿಚ್ಛಿಸುವುದಿಲ್ಲ; ಅಂದಬಳಿಕ, ಈ ಸೊಟ್ಟ ಪೃಥ್ವಿಯಗೋಸ್ಕರ ನಾನು ಅವರನ್ನು ಕೊಲ್ಲಲೇ? ಛೀ ! ಅದು ನನ್ನಿಂದ ಎಂದಿಗೂ ಆಗದು. ಅವರೇ ನನ್ನನ್ನು ಕೊಲ್ಲಲಿ. ನಾನು ಮಾತ್ರ ಅವರನ್ನು ಕೊಲ್ಲಲಾರೆ, ಕೃಷ್ಣಾ, ಕೌರವರನ್ನು ಕೊಂದರೆ ನಮಗೆ ಕ್ಷೇಮವಾದೀತೆ? ಇಲ್ಲ, ಇಲ್ಲ. ಪಾಪವನ್ನು ಮಾತ್ರ ಉಡಿಯಲ್ಲಿ

ಕಟ್ಟಿಕೊಂಡಂತಾಗುವುದಲ್ಲದೆ ಮತ್ತೇನೂ ಇಲ್ಲ. ಆದಕಾರಣ, ಬಾಂಧವರಾದ ಕೌರವರನ್ನು ಕೊಲ್ಲುವುದು ಸರ್ವಥಾ ಉಚಿತವಲ್ಲ. ಸ್ವಜನರನ್ನು ಕೊಂದರೆ ಸುಖವಾಗುವುದೆಂತು? ಅವರೇನೋ, ಈಗ ಲೋಭದ ಮಬ್ಬಿನಲ್ಲಿ ಇರುವುದರಿಂದ ಕುಲಕ್ಷಯದಿಂದಾಗುವ ಅನರ್ಥವೂ ಮಿತ್ರದ್ರೋಹದಿಂದಾಗುವ ಪಾತಕವೂ ಅವರಿಗೆ ಕಾಣದಾಗಿದೆ! ಆದರೆ, ಅವುಗಳನ್ನು ತಿಳಿದವರಾದ ನಾವೂ ಅವರಂತೆಯೇ ಕುಣಿಯಬೇಕೆ? ಆ ಕುಂದುಗಳನ್ನು ಕಂಡ ನಾವುಗಳು ಕೂಡ ಆ ಪಾಪದಿಂದ ಪರಾವೃತ್ತರಾಗಬೇಡವೆ? ಕುಲಕ್ಷಯದಿಂದ ಎಂಥ ಅನರ್ಥಗಳು ಸಂಭವಿಸುತ್ತವೆಂಬುದನ್ನು ಬಲ್ಲಿಯಾ? ಕುಲಕ್ಷಯವಾದರೆ, ಸನಾತನವಾದ ಕುಲಧರ್ಮಗಳು ಹಾಳಾಗುವವು. ಧರ್ಮವು ಹಾಳಾಗಲು, ಅಧರ್ಮವು ಇಡೀ ಕುಲವನ್ನು ಮುಸುಕುವುದು. ಕುಲವನ್ನು ಅಧರ್ಮವು ಮುಸುಕಿತೆಂದರೆ, ಕುಲಸ್ತ್ರೀಯರು ಕೆಟ್ಟು ಹೋಗುವರು; ಹೆಂಗಸರು ಕೆಟ್ಟರೆಂದರೆ ವರ್ಣಸಂಕರವಾಗುವುದು; ವರ್ಣಸಂಕರವು ಕುಲಘ್ನರಾದವರ ಮತ್ತು ಕುಲದ ನರಕಕ್ಕೆ ಕಾರಣವು; ಪಿತೃಗಳು ಪಿಂಡೋದಕ ಕಾಣದೆ ಹೋಗುವರು. ಹೀಗೆ ಕುಲಘ್ನರು ಮಾಡುವ ವರ್ಣಸಂಕರಕಾರಕವಾದ ದೋಷಗಳಿಂದ ಜಾತಿ ಧರ್ಮಗಳೂ ಕುಲಧರ್ಮಗಳೂ ಮುಳುಗುವವು. ಕುಲಧರ್ಮಗಳು ಮುಳುಗಿದವೆಂದರೆ ಮನುಷ್ಯರು ನರಕದಲ್ಲಿ ಬೀಳುವರೆಂದು ಕೇಳಿದ್ದೇನೆ. ಅಯ್ಯೋ, ನಾವು ಎಂಥ ಘೋರವಾದ ಪಾತಕವನ್ನು ಮಾಡಲು ಪ್ರವೃತ್ತರಾಗಿದ್ದೇವಲ್ಲಾ! ರಾಜ್ಯಸುಖದ ಆಶೆಗಾಗಿ ಸ್ವಜನರನ್ನು ಕೊಲ್ಲಲು ಹೊರಟಿರುವೆವು! ಛೇ, ನಾನು ಯುದ್ಧ ಮಾಡುವವನಲ್ಲ! ಹೀಗೆ ನಾನು ಯುದ್ಧ ಮಾಡುವುದನ್ನು ಬಿಡುವುದರಿಂದ ಅವರು ನನ್ನನ್ನು ಸಹಜವಾಗಿ ಕೊಲ್ಲಬಹುದು! ಕೊಂದರೂ ಕೊಲ್ಲಲಿ. ಅದೇ ನನಗೆ ಕ್ಷೇಮವು"-ಅರ್ಜುನನು ಈ ರೀತಿಯಾಗಿ ಒಂದೇ ಸಮನೆ ಪ್ರಲಪಿಸುತ್ತಾನೆ. ಮತ್ತು 'ಯುದ್ಧ ಮಾಡುವವನಲ್ಲ' ಎಂದು ಹೇಳಿ, ಕೈಯೊಳಗಿನ ಬಾಣವನ್ನು ಬಿಸುಟು, ಕೆಳಕ್ಕೆ ಕುಳಿತುಬಿಡುತ್ತಾನೆ.

ಇದು ಭಗವದ್ಗೀತೆಯಲ್ಲಿ ಮುಂದೆರೆಯು ಎತ್ತಲ್ಪಟ್ಟ ಕೂಡಲೆ ನಮ್ಮ ಕಣ್ಣಿಗೆ ಬೀಳುವ ಮೊದಲನೆಯ ನೋಟವು. ಗೀತೆಯ ಉಪದೇಶಕ್ಕೆ ಈ ದೃಶ್ಯವೇ ಮೂಲವು, ಭಯಂಕರವಾದ ಯುದ್ಧದ ಸಿದ್ಧತೆಯನ್ನು ಮಾಡಿದ ಅರ್ಜುನನು ಒಮ್ಮಿಂದೊಮ್ಮೆ ಯುದ್ಧವನ್ನು ಮಾಡುವುದನ್ನೇ ಬಿಡಲು ಹವಣಿಸುತ್ತಾನೆ. ಆ ಭಯಂಕರವಾದ ಯುದ್ಧದಿಂದಾಗುವ ಸಾವಿರಾರು ಅನರ್ಥಪರಂಪರೆಗಳು ಆತನ ಕಣ್ಣೆದುರಿಗೆ ಕಟ್ಟುತ್ತವೆ. ಆ ಅನರ್ಥಗಳು ಒಂದೆರಡೆಂದು ಹೇಳಬೇಕೆ? ತನ್ನವರ ನಾಶ, ತನ್ನ ಗುರುಹಿರಿಯರ ನಾಶ, ತನ್ನ ಆಪ್ತೇಷ್ಟರ ನಾಶ, ಅದರಿಂದ ಕುಲಕ್ಷಯ, ಜಾತಿಕ್ಷಯ, ರಾಷ್ಟ್ರಕ್ಷಯ, ಕುಲಧರ್ಮ ಜಾತಿ ಧರ್ಮ ವರ್ಣಧರ್ಮಗಳ ಲೋಪ, ಸ್ತ್ರೀಪಾತಿವ್ರತ್ಯಭಂಗ, ವರ್ಣಸಂಕರ, ಧರ್ಮಭ್ರಷ್ಟತೆ, ಅಧರ್ಮಾಭಿವೃದ್ಧಿ ಪಿತೃಗಳಿಗೆ

ಪಿಂಡೋದಕದ ಅಭಾವ, ಇವೆಲ್ಲವುಗಳಿಂದುಂಟಾಗುವ ಪಾಪ, ಮಿತ್ರದ್ರೋಹ ಗುರುದ್ರೋಹ, ತನಗೂ ತನ್ನವರಿಗೂ ನರಕವಾಸ-ಹೀಗೆ ನೂರಾರು ಅನರ್ಥಗಳು ಅರ್ಜುನನ ಕಣ್ಣುಮುಂದೆ ಕಟ್ಟಿದ ಬಳಿಕ ಅವನಿಂದ ಯುದ್ಧ ಮಾಡುವುದು ಹೇಗೆ ಆಗಬೇಕು? ಆದಕಾರಣ, ಆತನು ಯುದ್ಧ ಮಾಡುವುದನ್ನು ಬಿಟ್ಟು ನಿಂತುದೇನಾಶ್ಚರ್ಯ?

೨ನೆಯ ಪ್ರಕರಣ

# ಹೇಗೆ ಕೊಲ್ಲಲಿ !

'ಹೇಗೆ ಕೊಲ್ಲಲಿ' ಎಂಬುದೇ ಮೂಲಪ್ರಶ್ನೆ. ಅರ್ಜುನನ ಈ ಪ್ರಶ್ನೆಯಲ್ಲಿ ಎಷ್ಟು ತರಹದ ಶಂಕೆಗಳು ಅಡಕವಾಗಿವೆ, ನೋಡಿರಿ. ಅರ್ಜುನನು ಕ್ಷತ್ರಿಯನು, ಯುದ್ಧವು ಆತನಿಗೆ ಮೈಯುಂಡ ವಿಷಯ. ಅಲ್ಲದೆ, ಕೌರವರೊಡನೆ ಕದನಮಾಡಬೇಕೆಂಬ ಕಲ್ಪನೆ ಅಂದೇ ಏನೂ ಹೊರಟಿರಲಿಲ್ಲ; ಅಂದಬಳಿಕ ಅಂದೇ ಏಕೆ ಆತನ ಮನದಲ್ಲಿ ಹೀಗೆ ಗಲಭೆ ಏಳಬೇಕು? ಅದೇ ಭೀಷ್ಮ, ಅದೇ ದ್ರೋಣ, ಅವರೇ ಕೌರವರು. ಹಿಂದಕ್ಕೆ ಅವರು ಕರುಣೆಯನ್ನು ಹುಟ್ಟಿಸಲಿಲ್ಲವೇಕೆ? ಇಂದು ಕರುಣೆಯನ್ನು ಹುಟ್ಟಿಸಿದರೇಕೆ?

ಯುದ್ಧಾರಂಭದಲ್ಲಿ, ದುರ್ಯೋಧನನು ತುಸು ಖತಿಗೊಡಂತೆ, ಅರ್ಜುನನು ತನಗೆ ಜಯವು ಸಿಕ್ಕುವುದೋ ಇಲ್ಲವೋ ಎಂಬ ಸಂದೇಹವುಂಟಾಗಿ ಖತಿಗೊಂಡನೆಂದೆನ್ನಬೇಕೆ ? ಇಲ್ಲ. ಆತನಿಗೆ ಜಯದ ಬಗ್ಗೆ ಪೂರ್ಣವಿಶ್ವಾಸ. ತಾನು ಸೋಲುವೆನೆಂಬ ಸಂದೇಹವು ಆತನ ಮನದಲ್ಲಿ ಕ್ಷಣಮಾತ್ರವೂ ಬರಲಿಲ್ಲ. ಯುದ್ಧದಿಂದುಂಟಾಗುವ ಸಾಧಕಬಾಧಕ ಪ್ರಮಾಣಗಳನ್ನು ತತ್ವಜ್ಞಾನದ ದೃಷ್ಟಿಯಿಂದ ತೂಗಿನೋಡಿ, ಆತನು ಯುದ್ಧದಿಂದ ಹಿಂದಕ್ಕೆ ಸರಿದು ನಿಂತನೆನ್ನಬೇಕೆ? ಹಾಗೂ ತೋರುವುದಿಲ್ಲ. ಶುಷ್ಕ ತರ್ಕಕ್ಕೆ ಅದು ಸಮಯವಲ್ಲ. ಅಲ್ಲದೆ, ಅದು ಆತನ ಸ್ವಭಾವವೂ ಅಲ್ಲ. ಆತನು ಹೇಳಿ ಕೇಳಿ ವೀರ ಕ್ಷತ್ರಿಯನು.

ಎಂದಿಲ್ಲದ ಮೋಹವು ಅಂದು ಆತನನ್ನು ಆವರಿಸುವುದಕ್ಕೆ ಕಾರಣವೇನು? ಇದಕ್ಕೆ ಮತ್ತೇನೂ ಕಾರಣವಿಲ್ಲ. ಆತನ ಕೋಮಲ ಮನಸ್ಸೇ ಅದಕ್ಕೆ ಕಾರಣ; ಆತನ ಮೃದುಹೃದಯವೇ ಅದಕ್ಕೆ ಮೂಲ. ಮೃದುವಾದ ಅಂತಃಕರಣವುಳ್ಳವರಿಗೆ, ಭಯಂಕರವಾದ ಆಪತ್ತಿನ ಕೊನೆಯ ಸಮಯದಲ್ಲಿ ಹೀಗೆ ಒಮ್ಮೆಲೆ ಮನಃಸ್ಥಿತಿಯು ಬದಲಾಗುವದುಂಟು. ಇದಕ್ಕೆ ಇತಿಹಾಸದಲ್ಲಿಯೂ ಪುರಾಣದಲ್ಲಿಯೂ ಅನೇಕ ಉದಾಹರಣೆಗಳಿವೆ. ಒಂದು ಯುದ್ಧದಲ್ಲಿ ತಾನು ಮಾಡಿದ ಹಿಂಸೆಯು ಅಶೋಕನ ಇಡೀ ಆಯುಷ್ಯದ ದಿಶೆಯನ್ನೇ ಬದಲುಮಾಡಿ, ಆತನಿಗೆ ಅಹಿಂಸಾವ್ರತವನ್ನು ಸ್ವೀಕರಿಸಲು ಹಚ್ಚಲಿಲ್ಲವೆ? ಅಜಮಿಳನಿಗೆ ಅಂತ್ಯಕಾಲಕ್ಕೆ ಆಕಸ್ಮಿಕವಾಗಿ ಉಪರತಿಯುಂಟಾಗಲಿಲ್ಲವೆ? ಸಂಕಟಸಮಯದಲ್ಲಿ, ಅಂತಃಕರಣದ ಬಾಗಿಲು ಧಡಧಡನೆ ಬಡೆಯಲ್ಪಡುವುದರಿಂದ ಎಚ್ಚರವಾಗುತ್ತದೆ. ಅರ್ಜುನನ ವಿಷಾದವು ಅಂಥ ವಿಷಾದವು. ಪರರ

ದುಃಖವನ್ನು ಕಂಡು ಮರಮರ ಮರಗುವವರ ದುಃಖವು ಅದು. ಅನ್ಯರ ಸಂಕಟಗಳನ್ನು ಸಹಿಸಲಾರದೆ, ಹೊಟ್ಟೆಯೊಳಗಾಗುವ ಕಸವಿಸಿ ಅದು.

ಅನೇಕ ವರುಷಗಳಿಂದ, ಆ ಜ್ವಾಲಾಮುಖಿಯು ಆತನಿಗೆ ಗೊತ್ತಿಲ್ಲದಂತೆ, ಹೊತ್ತುತ್ತಲೇ ಇತ್ತು. ಮನೋವಿಕಾರಗಳ ಲಾಕ್ಷಾರಸವು ಕುದಿಯುತ್ತಲೇ ಇತ್ತು. ಅಂದು ಆಕಸ್ಮಿಕವಾಗಿ, ಬಲುದಿವಸಗಳಿಂದ ಹುದುಗಿಕೊಂಡಿದ್ದ ಆ ಜ್ವಾಲಾಮುಖಿಯ ಸ್ಫೋಟವಾಯಿತು! ಕೂಡಲೆ, ಮೇಲೆ ಮುಸುಕಿಕೊಂಡಿದ್ದ ಆತನ ಯುದ್ಧದ ಹುಮ್ಮಸವು ಸುಟ್ಟು ಬೂದಿಯಾಯಿತು! ಯುದ್ಧಕ್ಕೆ ನಿಲ್ಲುವ ಮುಂಚೆ ಆತನ ಮನಃಸ್ಥಿತಿಯು ಹೇಗಿತ್ತು ನೋಡಿರಿ. ಜಯದ ಬಗ್ಗೆ ನಿಃಸಂದೇಹ, ಪೂರ್ಣ ಉತ್ಸಾಹ, ರಾಜ್ಯಗಳಿಸಬೇಕೆಂಬ ಆಕಾಂಕ್ಷೆ, ಭೋಗಗಳನ್ನು ಭೋಗಿಸುವ ಇಚ್ಛೆ, ಕೌರವರು ಕಃಪದಾರ್ಥರೆಂಬ ಹೆಮ್ಮೆ, ತನ್ನದು ಸತ್ಪಕ್ಷವೆಂಬ ಅಭಿಮಾನ, ತೋಳ್ತಿಂಡಿಯನ್ನು ತೀರಿಸಿಕೊಳ್ಳುವ ಲವಲವಿಕೆ, ದುರ್ಬುದ್ಧಿಯಾದ ದುರ್ಯೋಧನನ ಬಗ್ಗೆ ಧಿಃಕಾರ! ಆದರೆ, ಕ್ಷಣಾರ್ಧದಲ್ಲಿ ಇವೆಲ್ಲವೂ ಮಿಂಚಿನಂತೆ ಮಾಯವಾದವು. ಅವುಗಳ ಸ್ಥಳದಲ್ಲಿ ಜಯದ ಬಗ್ಗೆ ಸಂದೇಹ, ನಿರುತ್ಸಾಹ, ರಾಜ್ಯದ ಬಗ್ಗೆ ಉದಾಸೀನತೆ, ಭೋಗಗಳ ಬಗ್ಗೆ ತಿರಸ್ಕಾರ, ಕೌರವರ ಬಗ್ಗೆ ಕರುಣೆ, ತಾನು ಮಾಡುವುದು ಪಾಪಕರ್ಮವೆಂಬ ಭಾವನೆ, ಶರೀರದಲ್ಲಿ ಕಂಪ, ಮನದಲ್ಲಿ ಅನುಕಂಪ, ಪಾಪದ ಭೀತಿ, ಧರ್ಮದ ಭೀತಿ ಇವೆಲ್ಲವೂ ಅವನಲ್ಲಿ ಒಡಮೂಡಿದವು.

ಈ ಹೊಸ ವಿಕಾರಗಳು ಆತನ ಅಂತಃಕರಣದಲ್ಲಿ ಅಲ್ಲೋಲ ಕಲ್ಲೋಲವನ್ನೆಬ್ಬಿಸಿದವು. ಆ ಭಯಂಕರವಾದ ಮಹಾಯುದ್ಧದಿಂದಾಗುವ ಅಸಹ್ಯವಾದ ಕೊಲೆಯ ನೋಟವು ಆತನ ಮನದಲ್ಲಿ ಹೇಸಿಕೆಯನ್ನು ಹುಟ್ಟಿಸಿತು. ಆಪ್ತೇಷ್ಟರನ್ನು ಕೊಲ್ಲುವ ವಿಚಾರವು ಆತನ ಮನವನ್ನು ತಲ್ಲಣಿಸಿತು. ಸ್ವಜನರ ಕೊಲೆ, ಗುರುಹಿರಿಯರ ಕೊಲೆ, ಕ್ಷತ್ರಿಯ ಕುಲದ ಸಂಹಾರ ಇವುಗಳ ಭೀಕರವಾದ ದೃಶ್ಯವು ಆತನ ಕಣ್ಣಮುಂದೆ ಕಟ್ಟಿ ಆತನ ಕಣ್ಣುಗಳನ್ನು ಕತ್ತಲೆಗುಡಿಸಿತು. ಯುದ್ಧದಲ್ಲಿ ಮೃತ್ಯುದೇವತೆಯು ಮಾಡುವ ನೃತ್ಯವು ಆತನ ಹೃದಯವನ್ನು ವಿದಾರಿಸಿತು. ಅಲ್ಲಿ ಪ್ರಜ್ವಲಿಸುವ ಜ್ವಾಲೆಯು ಆತನ ಮನಕ್ಕೆ ವಿಲಕ್ಷಣವಾದ ಬರೆಯನ್ನು ಕೊಟ್ಟಿತು. ಶತ್ರುಗಳ ಆಕ್ರೋಶದ ಶಲ್ಯವು ಆತನ ಅಂತಃಕರಣವನ್ನು ಚುಚ್ಚಿತು. ಹೀಗೆ ಆತನಿಗೆ ಶಾರೀರಿಕ ಮಾನಸಿಕ ವ್ಯಥೆಗಳಾದುದಲ್ಲದೆ, ನೈತಿಕ, ಸಾಮಾಜಿಕ, ಧಾರ್ಮಿಕ ವಿಚಾರಗಳೂ ಆತನ ಕೈಯನ್ನು ತಡೆಹಿಡಿದವು. ಹಿಂಸೆಯು ಯಾವ ನೀತಿಯು? ಕಟುಕತನದ ಕೊಲೆಯು ಯಾವ ನೀತಿಯು? ಆಪ್ತೇಷ್ಟರನ್ನು ಕೊಲ್ಲುವುದು ಯಾವ ನೀತಿಯು? ಗುರುಹಿರಿಯರನ್ನು ವಧಿಸುವುದು ಯಾವ ನೀತಿಯು? ಇವೆಲ್ಲವೂ ಸಮಾಜಘಾತಕ ಕೃತ್ಯಗಳಲ್ಲವೆ? ಧರ್ಮಕ್ಕೆ ವಿರುದ್ಧವಾದ ಕೃತ್ಯಗಳಲ್ಲವೆ? ಧರ್ಮವು ಸ್ವಜನರನ್ನು ಕೊಲ್ಲಲು ಹೇಳುತ್ತಿರಬಹುದೆ? ಕುಲವನ್ನು ಹಾಳುಮಾಡುವುದಕ್ಕೆ ಉಪದೇಶಿಸುತ್ತಿರಬಹುದೆ? ರಾಷ್ಟ್ರವು ಈ

ಕುಲ, ಜಾತಿ, ವರ್ಣ ಇವುಗಳ ಅಸ್ತಿವಾರದ ಮೇಲೆ ನಿಂತಿರುವುದಿಲ್ಲವೆ? ಅಯ್ಯೋ, ಅವೇ ಈಗ ಕುಪ್ಪಳಿಸಿಕೊಂಡು ಬೀಳುತ್ತವೆಯಲ್ಲಾ! 'ಕ್ಷತ್ರಿಯರಿಗೆ ಯುದ್ಧ ಮಾಡುವುದು ಧರ್ಮವು' ಎಂಬ ಉತ್ತರವನ್ನು ಯಾರಾದರೂ ಕೊಡಬಹುದು. ಆದರೆ ಹೀಗೆ ಮನಸ್ಸಿಗೆ ವಿರುದ್ಧವಾಗಿರುವ, ರಾಷ್ಟ್ರಕ್ಕೆ ಹಾನಿಯನ್ನುಂಟುಮಾಡುವ ಕ್ಷತ್ರಿಯತ್ವಕ್ಕಿಂತಲೂ ಅದನ್ನು ತೊಲಗಿ, ಮತ್ತಾವುದೊಂದು ಶ್ರೇಷ್ಠ ಧರ್ಮವನ್ನು ಸ್ವೀಕರಿಸಿದರೆ ತಪ್ಪೇನು? ತಾನು ಕ್ಷತ್ರಿಯ ಕುಲದಲ್ಲಿ ಹುಟ್ಟಿದ ಮಾತ್ರಕ್ಕೆ ಅದಕ್ಕಿಂತ ಹೆಚ್ಚಿನ ಧರ್ಮವನ್ನವಲಂಬಿಸಲೇ ಬಾರದೊ? ಅದಕ್ಕೇ ಅಂಟಿಕೊಂಡು ಕುಳಿತುಕೊಳ್ಳಬೇಕೆಂದು ಹೇಳುವುದು ಹೇಗೆ ಸರಿಯಾದೀತು? ಇದರಿಂದ, ಇಹಲೋಕದಲ್ಲಿ ಸೌಖ್ಯವಿಲ್ಲ, ಪರಲೋಕದಲ್ಲಿ ಪುಣ್ಯವಿಲ್ಲ. ಈ ರೀತಿಯಾಗಿ, ವೈಯಕ್ತಿಕ ದೃಷ್ಟಿಯಿಂದಲೇ ವಿಚಾರಮಾಡಲಿ, ಸಾಮಾಜಿಕ ದೃಷ್ಟಿಯಿಂದಲೇ ವಿಚಾರಮಾಡಲಿ, ನೀತಿ ದೃಷ್ಟಿಯಿಂದಲೇ ವಿಚಾರ ಮಾಡಲಿ, ಧರ್ಮ ದೃಷ್ಟಿಯಿಂದಲೇ ವಿಚಾರಮಾಡಲಿ, ಯಾವ ದೃಷ್ಟಿಯಿಂದಲೇ ವಿಚಾರಮಾಡಿದರೂ ಅರ್ಜುನನಿಗೆ ತನ್ನ ಆ ಕೃತ್ಯವು ಗರ್ಹಣೀಯವಾಗಿಯೇ ತೋರಿತು! ತನ್ನ ಅಧಃಪಾತ, ತನ್ನ ಕುಲದ ಅಧಃಪಾತ, ತನ್ನ ಸಮಾಜದ ಅಧಃಪಾತ, ತನ್ನ ರಾಷ್ಟ್ರದ ಅಧಃಪಾತ-ಇಂಥ ಘೋರವಾದ ಪರಿಣಾಮಗಳನ್ನುಂಟುಮಾಡುವ ಆ ಯುದ್ಧವು ಆತನಿಗೆ ಹೇಗೆ ಸೊಗಸಬೇಕು? ಆತ್ಮದ್ರೋಹ, ಬಂಧುದ್ರೋಹ, ಗುರುದ್ರೋಹ, ಮಿತ್ರದ್ರೋಹ, ನೀತಿದ್ರೋಹ, ಸಮಾಜ ದ್ರೋಹ, ರಾಷ್ಟ್ರದ್ರೋಹ, ಧರ್ಮದ್ರೋಹ, ಇಷ್ಟೆಲ್ಲ ದ್ರೋಹಗಳನ್ನು ಕಟ್ಟಿಕೊಂಡು, ಯುದ್ಧ ಮಾಡುವದಕ್ಕಿಂತಲೂ ತಾನೇ ಸಾಯುವುದೇ ಲೇಸಲ್ಲವೆ? ಇವೇ ಮುಂತಾದ ವಿಚಾರಗಳು ಉದ್ಭವಿಸಿದ ಕಾರಣ, ಆತನ ಮನದಲ್ಲಿ ಮಬ್ಬು ಇಡುಗಿತು, ಉತ್ಸಾಹವು ಅಡಗಿತು. ಆದಕಾರಣವೇ ಆತನು 'ನನಗೆ ಯುದ್ಧವು ಬೇಡವಾಗಿದೆ, ನನಗೆ ರಾಜ್ಯವು ಬೇಡವಾಗಿದೆ, ನನಗೆ ಜಯದ ಇಚ್ಛೆ ಉಳಿದಿರುವುದಿಲ್ಲ, ನನಗೆ ಭೋಗಗಳು ಬೇಡವಾಗಿವೆ, ನನಗೆ ಸುಖದ ಆಶೆಯಿರುವುದಿಲ್ಲ, ನಾನು ಆಪ್ತೇಷ್ಟರನ್ನು ಕೊಲ್ಲಲಾರೆ, ನನ್ನನ್ನು ಅವರು, ಬೇಕಾದರೆ ಕೊಲ್ಲಲೊಲ್ಲರು' ಎಂದು ಮುಂತಾಗಿ ಒರಲಹತ್ತಿದನು.

'ಹೇಗೆ ಕೊಲ್ಲಲಿ' ಎಂಬುದರಲ್ಲಿ ಇಷ್ಟೆಲ್ಲ ಅರ್ಥವು ಅಡಕವಾಗಿದೆ.

೩ನೆಯ ಪ್ರಕರಣ

# ಈ ವಿಷಾದಕ್ಕೂ ನಮಗೂ ಸಂಬಂಧವೇನು?

ಹಿಂದಿನ ಪ್ರಕರಣದಲ್ಲಿ, ಅರ್ಜುನನ ವಿಷಾದದ ಅರ್ಥವೇನೆಂಬುದನ್ನು ಹೇಳಿದೆವಷ್ಟೆ. ಈ ಪ್ರಕರಣದಲ್ಲಿ ಆ ವಿಷಾದಕ್ಕೂ ನಮಗೂ ಏನು ಸಂಬಂಧವಿರುತ್ತದೆಂಬುದನ್ನು ಹೇಳುತ್ತೇವೆ. ಏಕೆಂದರೆ, ಹಾಗೆ ಆ ವಿಷಾದಕ್ಕೂ ನಮಗೂ ಸಂಬಂಧವಿಲ್ಲದಿದ್ದರೆ, ಕೇವಲ ಅರ್ಜುನನ ವಿಷಾದವನ್ನು ತೆಗೆದುಕೊಂಡು ನಾವು ಮಾಡುವುದೇನು? ಕೃಷ್ಣನು ಅರ್ಜುನನನ್ನು ಮನಗಾಣಿಸಿ, ಆತನನ್ನು ಪುನಃ ಯುದ್ಧಕ್ಕೆ ನಿಲ್ಲಿಸಿರಬಹುದು ಅಥವಾ ನಿಲ್ಲಿಸಿರಲಿಕ್ಕಿಲ್ಲ. ಆದರೆ, ನಾವೇನೂ ಆತನಂತೆ ಯುದ್ಧಕ್ಕೆ ಹೊರಟೆಯೂ ಇಲ್ಲ, ಯುದ್ಧದಿಂದ ಸರಿದೂ ನಿಂತಿಲ್ಲ. ಅಂದ ಬಳಿಕ, ನಾವೇಕೆ ಗೀತೆಯನ್ನು ಓದಬೇಕು ಎಂಬ ಪ್ರಶ್ನೆ ಹುಟ್ಟುವುದು ಸಹಜವಿದೆ. ಅದಕ್ಕೆ ನಾವು ಈ ಪ್ರಕರಣದಲ್ಲಿ ಉತ್ತರ ಕೊಡುತ್ತೇವೆ.

ಅರ್ಜುನನು ಸ್ವತಃ ತನ್ನ ಮಟ್ಟಿಗೆ ಮಾತ್ರವೇ ಶಂಕೆಗಳನ್ನು ಎತ್ತಿದ್ದೇನೋ ನಿಜ. ಆದರೆ, ಆ ಶಂಕೆಗಳಲ್ಲಿ, ನಮ್ಮ ನಿಮ್ಮ ಮನದಲ್ಲಿ ಅನೇಕ ಸಲ ಉಂಟಾಗಬಹುದಾದ ಅನೇಕ ಶಂಕೆಗಳು ಅಡಕವಾಗಿರುತ್ತವೆ. ಏಕೆಂದರೆ, ನಾವು ಹಿಂದಿನ ಪ್ರಕರಣದಲ್ಲಿ ಹೇಳಿದಂತೆ, ಅರ್ಜುನನು ತನ್ನ ಸ್ವಂತಕ್ಕಾಗಿ ವಿಶೇಷ ಮರುಗಲಿಲ್ಲ, ತನ್ನ ಕೃತ್ಯದಿಂದ ತನ್ನ ಕುಲಕ್ಕೆ, ತನ್ನ ಸಮಾಜಕ್ಕೆ ಹಾನಿಯಾಗುತ್ತದೆಂಬ ಕಾರಣದಿಂದ ಮರುಗಿದನು. ಆದಕಾರಣ ಅದು ಕೇವಲ ವೈಯಕ್ತಿಕ ಪ್ರಶ್ನೆಯಾಗಿರಲಿಲ್ಲ, ಸಾಮಾಜಿಕ ಪ್ರಶ್ನೆಯಾಗಿದೆ. ದೇಶದಲ್ಲಿ, ಇಂಥ ಪ್ರಸಂಗಗಳು ಅನೇಕಸಲ ಉದ್ಭವಿಸುತ್ತವೆ. ಆಗಿನ ಕಾಲಕ್ಕೆ ಒಂದು ಕಡೆಗೆ ಕೆರೆ, ಮತ್ತೊಂದು ಕಡೆಗೆ ಬಾವಿ- ಹೀಗೆ ಸ್ಥಿತಿಯಾಗುತ್ತದೆ. ಆದಕಾರಣ ಇಂಥ ಪ್ರಸಂಗದಲ್ಲಿ, ಮನುಷ್ಯನು ಹೇಗೆ ಆಚರಿಸಬೇಕೆಂಬುದು ತಿಳಿಯದಾಗುತ್ತದೆ. ಕೆಲವು ಸಲ, ಯುದ್ಧದ ಪ್ರಸಂಗಗಳು ಬರಬಹುದು, ಮತ್ತೆ ಕೆಲವು ಸಲ, ಮತ್ತೆ ಬೇರೆ ತರಹದ ಪ್ರಸಂಗಗಳು ಬರಬಹುದು. ಉದಾ- ಒಪ್ಪಂದ ಮಾಡುವ ಪ್ರಸಂಗ ಬರಬಹುದು, ಸೋತು ಹೋದಾಗ ಶರಣು ಹೋಗುವ ಪ್ರಸಂಗ ಬರಬಹುದು, ಅಥವಾ ಪ್ರಬಲ ಶತ್ರುವಿನೆದುರಿಗೆ ಪಲಾಯನಸೂತ್ರವನ್ನು ಹೇಳುವ ಪ್ರಸಂಗ ಬರಬಹುದು. ಇದಾಯಿತು, ಕ್ಷತ್ರಿಯ ಜೀವನದಲ್ಲಿಯ ಪ್ರಸಂಗಗಳು, ಹಾಗೆಯೇ ಮಿಕ್ಕ ವ್ಯವಸಾಯಗಳಲ್ಲಿಯೂ ಇದೇ ತರಹದ ತೊಡಕಿನ ಪ್ರಶ್ನೆಗಳು ಉದ್ಭವಿಸುತ್ತಿರುತ್ತವೆ. ಕುಟುಂಬದ ಮಾನರಕ್ಷಣೆಗೋಸ್ಕರ ಪ್ರಾಣವನ್ನು ತೊರೆಯುವ ಪ್ರಸಂಗ ಬರಬಹುದು, ದೇಶಸೇವೆಗೋಸ್ಕರ ಕುಟುಂಬ ತ್ಯಾಗವನ್ನು ಮಾಡುವ ಪ್ರಸಂಗ ಬರಬಹುದು,

ಅಥವಾ ಅನೇಕ ಸಲ ತದ್ವಿರುದ್ಧವಾಗಿ, ಕುಟುಂಬ ಸಂರಕ್ಷಣೆಗೋಸ್ಕರ, ದೇಶಸೇವೆಯನ್ನು ಮಾಡುವುದನ್ನು ಬಿಡುವ ಪ್ರಸಂಗವೂ ಬರಬಹುದು. ಧರ್ಮಕ್ಕೋಸ್ಕರ ದೇಶಸೇವೆ ಬಿಟ್ಟುಕೊಡುವ ಪ್ರಸಂಗವೂ ಬರಬಹುದು. ಹೀಗೆ, ಮನುಷ್ಯನಿಗೆ ತನ್ನ ಜೀವಿತದಲ್ಲಿ ಅನೇಕ ಸಲ, ಅನೇಕ ತೊಡಕಿನ ಪ್ರಶ್ನೆಗಳು ಉದ್ಭವಿಸುತ್ತವೆ. ಆ ಕಾಲದಲ್ಲಿ ಮನುಷ್ಯನು ಹೇಗೆ ಆಚರಿಸಬೇಕೆಂಬುದನ್ನು ನಿರ್ಣಯಿಸುವುದಕ್ಕೆ ಏನಾದರೂ ಆಧಾರವಿದೆಯೋ, ಅಥವಾ ತನ್ನ ಮನಸ್ಸಿಗೆ ಬಂದಂತೆ ತಾನು ಆಚರಿಸಬೇಕೋ ಎಂಬ ಪ್ರಶ್ನೆಯು ಅತ್ಯಂತ ಮಹತ್ವವಾದ ಪ್ರಶ್ನೆಯು, ಸ್ವಜನರನ್ನು ಕೊಂದು ಗಳಿಸಿದ ರಾಜ್ಯದಿಂದೇನು ಪ್ರಯೋಜನವೆಂಬುದೇ ಅರ್ಜುನನ ಮೊದಲನೆಯ ಪ್ರಶ್ನೆ, ಇದರ ಅರ್ಥವೇನು? ಸ್ವಜನರನ್ನು ಕೊಲ್ಲುವ ಪ್ರಸಂಗ ಬಂದಾಗ, ಅವರನ್ನು ಕೊಂದು ಭೋಗವನ್ನು ಗಳಿಸಬೇಕೋ ಅಥವಾ ಭೋಗವನ್ನು ಬದಿಗಿಟ್ಟು ಬಂಧುಬಳಗದವರನ್ನು ಕೊಲ್ಲುವುದನ್ನೇ ಬಿಡಬೇಕೊ ಎಂಬ ಪ್ರಶ್ನೆ ಹುಟ್ಟುತ್ತದೆ. ಅಂದರೆ, ಐಹಿಕ ಸುಖವು ಹೆಚ್ಚಿನದೋ ಬಂಧುಪ್ರೇಮವು ಹೆಚ್ಚಿನದೋ ಎಂದು ಕೇಳಿದಂತಾಯಿತು. ಈ ಪ್ರಶ್ನೆಯನ್ನು ಈ ರೀತಿಯಲ್ಲಿ ಇಟ್ಟರೆ ಇದು ಸಾರ್ವಜನಿಕ ಪ್ರಶ್ನೆಯಾಗಲಿಲ್ಲವೆ? ತನ್ನ ಸುಖಕ್ಕಾಗಿ ತನ್ನವರನ್ನು ದುಃಖಕ್ಕೆ ಈಡು ಮಾಡುವ ಪ್ರಸಂಗಗಳು ಯಾರಿಗೆ ಬರುವುದಿಲ್ಲ? ಅಂಥ ಸಂದರ್ಭದಲ್ಲಿ ಮನುಷ್ಯನು ಹೇಗೆ ಆಚರಿಸಬೇಕು? ಕುಲಕ್ಷಯವು ಹೆಚ್ಚಿನದೋ ದುಷ್ಟ ನಿಗ್ರಹವು ಹೆಚ್ಚಿನದೋ, ಯುದ್ಧದಲ್ಲಿ ಸ್ವಜರನ್ನು ಕೊಲ್ಲುವುದು ಪಾತಕವಲ್ಲವೇ? ಇವೇ ಮುಂತಾದ ಪ್ರಶ್ನೆಗಳೆಲ್ಲವೂ ಸಾರ್ವಜನಿಕ ಪ್ರಶ್ನೆಗಳೇ. ಆದಕಾರಣ, ಇವುಗಳಿಗೆ ಕೃಷ್ಣನು ಏನೆಂದು ಉತ್ತರ ಕೊಡುತ್ತಾನೆಂಬುದರ ಕುತೂಹಲವು ಪ್ರತಿಯೊಬ್ಬರಿಗೆ ಉಂಟಾಗುವುದು ಸಹಜವಿದೆ.

ಇದಲ್ಲದೆ, ಅರ್ಜುನನ ಪ್ರಶ್ನೆಗೆ ಮತ್ತೂ ಒಂದು ರೀತಿಯಿಂದ ಸಾರ್ವಜನಿಕ ಮಹತ್ವವಿರುತ್ತದೆ. ಏಕೆಂದರೆ, ಅರ್ಜುನನ ಶಂಕೆಯು, ಸಕೃದ್ದರ್ಶನಕ್ಕೆ, ಯುದ್ಧ ಕೃತ್ಯಕ್ಕೆ ಮಾತ್ರವೇ ಅನ್ವಯಿಸುವಂತೆ ತೋರಿದರೂ, ನಿಜವಾಗಿ ಆತನ ಮನದಲ್ಲಿ ಯಾವತ್ತು ಬಗೆಯ ಕರ್ಮಗಳ ವಿಷಯವಾಗಿಯೇ ಅಶ್ರದ್ಧೆಯುಂಟಾಗಿತ್ತು, ಏಕೆಂದರೆ, ಕೇವಲ ಯುದ್ಧದಂಥ ವಿಶೇಷ ಸಂದರ್ಭಗಳಲ್ಲಿಯೇ ಈ ತರಹದ ಪಾಪ ಪುಣ್ಯದ ವಿಚಾರವು ಮನಸ್ಸಿನಲ್ಲಿ ಉದ್ಭವಿಸುತ್ತದೆಂತಲ್ಲ. ಪ್ರತಿಯೊಂದು ಕೃತ್ಯವನ್ನು ಮಾಡುವಾಗ ಕೂಡ, ಪಾಪಪುಣ್ಯದ ವಿಚಾರವು ಮನದಲ್ಲಿ ಬಂದೇ ಬರುತ್ತದೆ. ಮನುಷ್ಯನು ಜಗತ್ತಿನಲ್ಲಿ ಯಾವುದೇ ಕರ್ಮ ಮಾಡಿದರೂ, ಅದರಿಂದ ಯಾರಿಗಾದರೂ ಹಾನಿಯಾಗೇ ಆಗುತ್ತದೆ. ಸರ್ವರಿಗೂ ಸರ್ವಕಾಲಕ್ಕೂ ಸರ್ವರೀತಿಯಿಂದಲೂ ಹಿತವಾಗುವ ಕೃತ್ಯವು ಒಂದೂ ಇರುವದಿಲ್ಲ. ಇಷ್ಟೇ ಅಲ್ಲ, ತನ್ನ ಸ್ವಂತಕ್ಕೂ ಕೂಡ, ಸರ್ವದೃಷ್ಟಿಯಿಂದಲೂ ಹಿತವಾಗುವ ಕೃತ್ಯವೂ ಒಂದೂ ಇರುವುದಿಲ್ಲ. ರಾಷ್ಟ್ರಕ್ಕೆ ಪರೋಪಕಾರವನ್ನು ಮಾಡಹೋದರೆ

ಕುಟುಂಬಕ್ಕೆ ಹಾನಿಯಾಗುತ್ತದೆ. ಕುಟುಂಬಕ್ಕೆ ಹಿತಮಾಡಹೋದರೆ, ವ್ಯಕ್ತಿಗೆ ಹಾನಿಯಾಗುತ್ತದೆ. ಹೀಗೆ ಸರ್ವಥಾ ಕಲ್ಯಾಣವಾಗುವ ಕೃತ್ಯವು ಒಂದೂ ಇಲ್ಲದ ಬಳಿಕ, ಈ ಜಗತ್ತಿನ ಗೊಡವೆಯನ್ನೇ ಬಿಟ್ಟುಕೊಟ್ಟು 'ರಾಮ' 'ರಾಮ'ವೆನ್ನುತ್ತ ಅಡವಿಯಲ್ಲಿ ಕಾಲಹರಣಮಾಡುವುದೇ ಲೇಸಲ್ಲವೆ? ಅಥವಾ ಆರಿಸ್ಟಾಟಲನ ಉಪದೇಶದಂತೆ ಎಲ್ಲರೂ ಆ ಶ್ರೇಷ್ಠವಾದ, ನಿರುಪದ್ರವಿಯಾದ ತತ್ವಚಿಂತನೆಯಲ್ಲಿ ಮಗ್ನವಾಗುವ ಜೀವನವನ್ನೇ ಕೈಕೊಳ್ಳುವದರಲ್ಲಿ ಕೆಡಕೇನಿದೆ? ಅಥವಾ, ಇದನ್ನೇ ಬೇರೊಂದು ರೀತಿಯಲ್ಲಿ ಹೇಳುವದಾದಲ್ಲಿ, ಎಲ್ಲರೂ ಆ ಉತ್ಕೃಷ್ಟವಾದ, ಶ್ರೇಷ್ಠವಾದ, ಶಾಂತಿಮಯವಾದ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ, ಎಲ್ಲರೂ ಕೇವಲ ಪರಮಾತ್ಮ ಚಿಂತನೆಯಲ್ಲಿ ಮಗ್ನರಾಗಬಾರದೇಕೆ ಎಂಬುದೇ ಅರ್ಜುನನ ಸಂದೇಹದ ಬುಡಕ್ಕಿರುವ ಮೂಲ ಪ್ರಶ್ನೆಯು. ಮತ್ತು ಮುಂದೆ, ಆತನು ಶ್ರೀಕೃಷ್ಣನನ್ನು ಸ್ಪಷ್ಟವಾಗಿಯೇ ಆ ಪ್ರಕಾರವಾಗಿ ಕೇಳಿ ಬಿಟ್ಟಿದ್ದಾನೆ. ಭೀಷ್ಮಾದಿಗಳನ್ನು ಕೊಂದು ಜೀವಿಸುವುದಕ್ಕಿಂತ ಭಿಕ್ಷೆ ಬೇಡಿ ಜೀವಿಸುವುದೇ ಲೇಸಲ್ಲವೆ? ಎಂದು ಕೇಳಿದ್ದಾನೆ. ಮತ್ತು ತಾನು ಕೇವಲ ಯುದ್ಧ ವಿಷಯಕ ಪ್ರಶ್ನೆಯನ್ನು ಮಾಡಿದ್ದರೂ ತನ್ನ ಶಂಕೆಯು ಯುದ್ಧ ಕೃತ್ಯದ ಮಟ್ಟಿಗೆ ಮಾತ್ರವೇ ಇರದೆ, ಇಡೀ ಕರ್ಮಕ್ಕೇನೇ ಸಂಬಂಧಿಸಿರುತ್ತದೆಂಬುದನ್ನು ಸೂಚಿಸಿದ್ದಾನೆ. ಕೊನೆಗೆ ಆತನು ಮತ್ತಿಷ್ಟು ಸ್ಪಷ್ಟವಾಗಿ ಹಾಗೆ ಕೇಳಿಬಿಟ್ಟಿದ್ದಾನೆ. ತಾನು ಧರ್ಮ ಸಮ್ಮೂಢನಾಗಿರುವನು ಎಂದರೆ ಧರ್ಮವಾವುದು ಅಧರ್ಮವಾವುದು ಎಂಬುದೇ ತಿಳಿಯದಾಗಿದೆಯೆಂದೂ ಧರ್ಮಾಧರ್ಮದ ವಿವೇಚನೆಯನ್ನು ಮಾಡಬೇಕೆಂದೂ ಕೃಷ್ಣನನ್ನು ಕೇಳಿಕೊಂಡಿದ್ದಾನೆ. ಆದಕಾರಣ ಅರ್ಜುನನ ಪ್ರಶ್ನೆಯು ವೈಯಕ್ತಿಕವೂ ಅಲ್ಲ, ಯುದ್ಧ ಕೃತ್ಯಕ್ಕಷ್ಟೇ ಸಂಬಂಧಿಸಿದುದೂ ಅಲ್ಲವೆಂಬುದು ಸ್ಪಷ್ಟವಾಗುತ್ತದೆ.

ಇನ್ನು, ಮತ್ತೂ ಒಂದು ದೃಷ್ಟಿಯಿಂದ ನೋಡಿದರೂ ಗೀತೆಯ ಉಪದೇಶವು ಸಾರ್ವಜನಿಕ ಉಪದೇಶವಿರುತ್ತದೆಂಬುದು ಗೊತ್ತಾಗುತ್ತದೆ. ಏಕೆಂದರೆ, ಅರ್ಜುನನ ಪ್ರಶ್ನೆಯು ಒಂದು ದೃಷ್ಟಿಯಿಂದ ಕೇವಲ ವೈಯಕ್ತಿಕವೆಂದು ತಿಳಿದರೂ ಶ್ರೀಕೃಷ್ಣನು ಅದನ್ನು ಬಿಡಿಸುವ ರೀತಿಯು ವೈಯಕ್ತಿಕವಾಗಿರದೆ, ಸಾರ್ವಜನಿಕವಾಗಿದೆಯೆಂಬುದು ಗೀತೆಯಲ್ಲಿ ಶ್ರೀಕೃಷ್ಣನು ಕೊಟ್ಟ ಉತ್ತರದಿಂದ ಗೊತ್ತಾಗುತ್ತದೆ. ಅರ್ಜುನನಿಗೆ ಕೊಟ್ಟ ಉತ್ತರದಲ್ಲಿ, ಯುದ್ಧ ಕೃತ್ಯದ ಅಥವಾ ಕೇವಲ ಕ್ಷತ್ರಿಯ ಧರ್ಮದ ಉಪದೇಶವು ಗೌಣವಾಗಿರುತ್ತದೆ. ಗೀತೆಯಲ್ಲಿ, ಮೊದಲಿನಿಂದ ಕೊನೆಯವರೆಗೆ, ಸಾಮಾನ್ಯತಃ ಪ್ರತಿಯೊಬ್ಬನು ಕರ್ಮ ಮಾಡಬೇಕೋ ಬೇಡವೋ, ಮಾಡುವುದಾದಲ್ಲಿ ಯಾವ ರೀತಿಯಿಂದ ಮಾಡಬೇಕು ಇವೇ ಮುಂತಾದ ಸರ್ವಸಾಮಾನ್ಯವಾದ ವಿವೇಚನೆಯೇ ತುಂಬಿದೆ. ಕರ್ಮಮಾಡಬೇಕು, ಕರ್ಮಬಿಡಬಾರದು ಎಂದು ಹೇಳಿ, ನಡುನಡುವೆ, ನೀನು ಈಗ ಮಾಡಬೇಕಾಗಿರುವ ಕರ್ಮವು ಯುದ್ಧ ಕರ್ಮವು, ಆದಕಾರಣ,

ಅದನ್ನು ಬಿಡಕೂಡದು ಎಂದು ಅರ್ಜುನನಿಗೆ ಎಚ್ಚರಿಕೆ ಕೊಟ್ಟಿದ್ದಾನೆ. ಸಾರಾಂಶ, ಯುದ್ಧದ ವಿವೇಚನೆಯು ಗೌಣವು. ಕರ್ಮಮಾಡಬೇಕೋ ಬೇಡವೋ, ಮಾಡುವುದಾದರೆ ಯಾವ ರೀತಿಯಲ್ಲಿ ಮಾಡಬೇಕು ಎಂಬುದರ ವಿವೇಚನೆಯೇ ಹೆಚ್ಚಿಗೆ ಇದೆ. ಆದುದರಿಂದಲೇ, ನಮಗೆ ಗೀತೆಯ ಮಹತ್ವವು. ಅದು ನಮ್ಮ ಜೀವನದ ಒಗಟವನ್ನು ಬಿಡಿಸುತ್ತದೆ. ಗೀತೆಯ ಮೊದಲನೆಯ ಅಂಕಿನಲ್ಲಿ ಮಾತ್ರ ಯುದ್ಧದ ಭಯಂಕರ ನೋಟ. ಮುಂದೆ ಕೂಡಲೆ, ಆ ನೋಟವು ಮಾಯವಾಗುತ್ತದೆ. ಶ್ರೀಕೃಷ್ಣಾರ್ಜುನರಿಬ್ಬರೇ ಶಾಂತವಾಗಿ ಕುಳಿತುಕೊಂಡು ಗುರುಶಿಷ್ಯರಂತೆ ಸಂವಾದವನ್ನು ನಡಿಸಿರುವರು. ವಾಚಕರು ಮೊದಲಿನ ಆ ಯುದ್ಧದ ನೋಟವನ್ನು ಪೂರ್ಣವಾಗಿ ಮರೆತುಬಿಡಬಹುದು. ಆ ಘೋರಗರ್ಜನೆ, ಆ ವಾದ್ಯವೈಭವ, ಆ ರಣಗಾಳಿ, ಆ ಮಹಾಭೀಷಣವಾದ ಆಯುಧಗಳು ಆ ಲಕ್ಷಾವಧಿ ವೀರಾಧಿವೀರರು ಇವರೆಲ್ಲರೂ ಅಲ್ಲಿಯೇ ರಣಾಂಗಣದಲ್ಲಿ ನಿಂತಿದ್ದರೂ ಅವರೆಲ್ಲರನ್ನೂ ವಾಚಕರು ಮರೆತುಬಿಡಬಹುದು. ಗೀತೆಗೂ ಆ ಮಹಾಸೈನ್ಯಕ್ಕೂ ಮುಂದೆ ಸಂಬಂಧವೇ ಇರುವುದಿಲ್ಲ. ಆದುದರಿಂದಲೇ ಗೀತೆಯು ಕೇವಲ ಲೋಕೋಪಕಾರಕ್ಕಾಗಿ ಬರೆಯಲ್ಪಟ್ಟ ಪುಸ್ತಕವೆಂದು ನಾವು ಹೇಳುವುದು.

೪ನೆಯ ಪ್ರಕರಣ

# ಶ್ರೀಕೃಷ್ಣನ ಉತ್ತರದ ದಿಗ್ದರ್ಶನ

ಅರ್ಜುನನ ಶಂಕೆಗಳು ಯಾವುದೆಂಬುದನ್ನೂ ನಮಗೂ ಅವಕ್ಕೂ ಸಂಬಂಧವೇನೆಂಬುದನ್ನೂ ನಾವು ಹೇಳಿದೆವಷ್ಟೆ. ಇನ್ನು ಈ ಮಹತ್ವದ ತೊಡಕನ್ನು ಶ್ರೀಕೃಷ್ಣನು ಯಾವರೀತಿಯಲ್ಲಿ ಬಿಡಿಸಿರುತ್ತಾನೆಂಬುದನ್ನು ಈ ಪ್ರಕರಣದಲ್ಲಿ ಸಂಕ್ಷೇಪವಾಗಿ ಹೇಳಿ ಮುಂದೆ ಅದನ್ನು ವಿಸ್ತರಿಸುತ್ತ ಹೋಗುವೆವು. ಇಲ್ಲಿ, ಮುಂದೆ ಹೇಳುವ ಉತ್ತರದ ದಿಶೆಯನ್ನು ಮಾತ್ರ ತೋರಿಸುವೆವು.

ಅರ್ಜುನನ ವಿಚಾರಸರಣಿಯು ಉದಾತ್ತವಾಗಿ ಕಾಣಿಸುವುದಿಲ್ಲವೆ? ನಿರುತ್ತರವಾಗಿ ಕಾಣಿಸುವುದಿಲ್ಲವೆ? ಆತನು ತೆಗೆದ ಉದ್ಗಾರಗಳು, ಸಕೃದ್ದರ್ಶನಕ್ಕೆ, ಎಷ್ಟು ಗಂಭೀರವಾದವುಗಳಾಗಿ ತೋರುತ್ತವೆ! ಆತನು ತನ್ನ ಮನೋವಿಕಾರಗಳ ಕಟ್ಟಡವನ್ನು ಸ್ವಾರ್ಥದ ತಳಹದಿಯ ಮೇಲೆ ಕಟ್ಟಿರಲಿಲ್ಲ. ಭದ್ರವಾದ ಪರಾರ್ಥದ, ಭೂತದಯೆಯ ತಳ ಹದಿಯಮೇಲೆ ಕಟ್ಟಿದ್ದನು. ಆ ಕಟ್ಟಡದ ಗೋಪುರವು ಅನೇಕ ಅಂತಸ್ತುಗಳುಳ್ಳದ್ದಾಗಿತ್ತು. ಕರುಣೆ, ಪ್ರೇಮ, ಭೂತದಯೆ, ಕುಲಧರ್ಮ, ಜಾತಿಧರ್ಮ, ಸ್ತ್ರೀಪಾತಿವ್ರತ್ಯ, ವರ್ಣವ್ಯವಸ್ಥೆ, ಸಮಾಜಸ್ವಾಸ್ಥ್ಯ, ಪರಲೋಕದ ಪುಣ್ಯ ಇವೇ ಮುಂತಾದವುಗಳು ಒಂದರ ಮೇಲಿನ ಒಂದು ಅಂತಸ್ತುಗಳಾಗಿದ್ದವು. ಆತನು ಈ ವಿವಿಧ ಧರ್ಮಗಳದೊಂದು ದೊಡ್ಡ ಚಕ್ರವ್ಯೂಹವನ್ನೇ ರಚಿಸಿದ್ದನೆನ್ನಬಹುದು. ಅದರಲ್ಲಿ, ಮನುಷ್ಯನು ಹೊಕ್ಕನೆಂದರೆ, ಹೊರಗೆ ತಿರುಗಿ ಬರುವುದೇ ದುಸ್ತರ. ಆದರೆ ಅದನ್ನು ಪ್ರವೇಶಿಸಿದವನು ಸಾಮಾನ್ಯನಾದ ಅಭಿಮನ್ಯುವಾಗಿರಲಿಲ್ಲ. ಪ್ರವೇಶ ಮಾಡಿದವನು ಸಾಕ್ಷಾತ್ ಶ್ರೀಕೃಷ್ಣನು. ಆತನು ಆ ದುರ್ಭೇದ್ಯವಾಗಿ ತೋರುವ ಕೋಟೆಯನ್ನು ಲೀಲೆಯಿಂದ ಭೇದಿಸಿದ್ದಾನೆ. ಗಾಳಿಗೋಪುರವನ್ನು ಉಫ್ ಎಂದು ಹಾರಿಸಿ ಬಿಟ್ಟಿದ್ದಾನೆ. ಅದರ ಇಂಗಿತವನ್ನು ತಿಳಿಯುವುದು ನಮ್ಮ ಮೊತ್ತಮೊದಲಿನ ಕೆಲಸ.

ಅರ್ಜುನನು ತನ್ನ ಸಂದೇಹಗಳನ್ನು ಆತನ ಮುಂದಿಟ್ಟು ಬಾಣವನ್ನು ಬಿಸುಟು, ಸ್ವಸ್ಥವಾಗಿ ಕುಳಿತಾಗ ಆತನ ಕಣ್ಣುಗಳಲ್ಲಿ ನೀರು ತುಂಬಿ ಬಂದವು. ಅದನ್ನು ನೋಡಿ, ಕೃಷ್ಣನು ಮರುಗಿದನೇ? ಇಲ್ಲ. ಅರ್ಜುನನೇನೋ ಕೃಷ್ಣನು ತನ್ನನ್ನು ಆ ಉದಾತ್ತ ವಿಚಾರಗಳಿಗಾಗಿ ಬೆನ್ನು ಚಪ್ಪರಿಸುವನೆಂದು ತಿಳಿದಿದ್ದನು. ವಾಚಕರಿಗೆ ಸಹ, ಅರ್ಜುನನ ತರ್ಕಸರಣಿಯು ನಿರ್ದೋಷವಾಗಿಯೇ ತೋರವುದಲ್ಲವೆ? ಆದರೆ, ಕೃಷ್ಣನು ಆತನ ಬೆನ್ನ ಚಪ್ಪರಿಸುವ ಬದಲು

ಆತನನ್ನು ಬೈಯಲಿಕ್ಕೆ ಪ್ರಾರಂಭಿಸಿದನು. 'ಅರ್ಜುನನೇ ಇವು ಹೊಲಸು ವಿಚಾರಗಳು, ನಿನ್ನದು ನಪುಂಸಕತನದ ಇರುವು, ಇದು ನಿನ್ನ ಹೃದಯದುರ್ಬಲತೆ' ಎಂದು ಹೀಯಾಳಿಸಿದನು. ಅವು ಹೀಗೆ ಏಕೆ ಎಂಬುದಕ್ಕೆ ಕೃಷ್ಣನು ಮೂರೇ ಶಬ್ದಗಳಲ್ಲಿ ಉತ್ತರ ಕೊಟ್ಟಿರುವನು. ಅವು ಯಾವುವೆಂದರೆ ಅವು (೧) ಅನಾರ್ಯಜುಷ್ಟವಾದವುಗಳು (೨) ಅಸ್ವರ್ಗ್ಯವಾದವುಗಳು (೩) ಮತ್ತು ಅಕೀರ್ತಿಕರವಾದವುಗಳು ಅಂದರೆ ಅರ್ಜುನನ ಆ ವಿಚಾರಗಳು (೧) ಸನಾತನ ಧರ್ಮಕ್ಕೆ ವಿರುದ್ಧವಾದವುಗಳೆಂದೂ (೨) ಸ್ವರ್ಗವನ್ನು ಕೊಡಲಿಕ್ಕೆ ಕೂಡ ಅನರ್ಹವಾದವುಗಳೆಂದೂ (೩) ಇಷ್ಟೆ ಅಲ್ಲ, ಆತನ ಧವಳಕೀರ್ತಿಗೆ ಕಲಂಕಹಚ್ಚುವಂಥವುಗಳೆಂದೂ ಕೃಷ್ಣನ ತಾತ್ಪರ್ಯ. ಇವುಗಳಲ್ಲಿಯೂ ಎರಡನೆಯ ಮತ್ತು ಮೂರನೆಯ ಉತ್ತರಗಳು ಸನಾತನ ಧರ್ಮಕ್ಕೂ ಮಿಕ್ಕ ಅನೇಕ ಧರ್ಮಗಳಿಗೂ ಸಾಮಾನ್ಯವಾದವುಗಳಿರುವುದರಿಂದ, ಗೀತೆಯಲ್ಲಿ, ಆ ಉತ್ತರಗಳ ವಿಸ್ತಾರವು ವಿಶೇಷವಾಗಿ ಬಂದಿರುವುದಿಲ್ಲ. ಮೊದಲನೆಯ ಉತ್ತರದ ವಿವೇಚನೆಯೇ ವಿಸ್ತಾರವಾಗಿ ಬಂದಿದೆ. ಗೀತೆಯೆಂದರೆ, ಸನಾತನಧರ್ಮದ ದೃಷ್ಟಿಯಿಂದ ಅರ್ಜುನನ ಆಕ್ಷೇಪಗಳಿಗೆ ಕೊಟ್ಟ ವಿಸ್ತಾರವಾದ ಉತ್ತರವೆಂದೇ ಹೇಳಬಹುದು.

ಗೀತೋಪದೇಶದ ವೈಲಕ್ಷಣ್ಯವು ಈ ಉತ್ತರದಲ್ಲಿ ಇದೆ. ಸನಾತನ ಧರ್ಮದ ಹೊರ್ತಾಗಿ ಮಿಕ್ಕಾವ ಧರ್ಮವೂ ಈ ಬಗೆಯ ಉತ್ತರವನ್ನು ಕೊಟ್ಟಿಲ್ಲ, ಕೊಡುವುದು ಶಕ್ಯವಿಲ್ಲ. ಗೀತೆಯು ಕೊಟ್ಟ ಉತ್ತರವು ಯಾವುದು, ಅದು ಹೇಗೆ ವಿಲಕ್ಷಣವಾಗಿದೆಂಬುದನ್ನು ಅತಿಸಂಕ್ಷೇಪವಾಗಿ ಹೇಳುತ್ತೇವೆ. ಗೀತೆಯು ಹೇಳುವುದೇನೆಂದರೆ "ಅಹುದು, ಈ ಯುದ್ಧವು ಭಯಂಕರವಾದ ಯುದ್ಧವು ನಿಜ; ಇದರಿಂದ ಕುಲಕ್ಷಯವಾಗುವುದೂ ಖಂಡಿತ, ವರ್ಣಸಂಕರವಾಗುವುದೂ ಕಟ್ಟಿಟ್ಟ ಮಾತು. ಇವೆಲ್ಲ ಅನರ್ಥಗಳನ್ನು ಮೈಮೇಲೆ ತೆಗೆದುಕೊಂಡೂ ಕೂಡ, ನೀನು ಯುದ್ಧ ಮಾಡಬೇಕೆಂದು ನಾನು ಹೇಳುವವನು. ನಾನು ಹೇಳುವ ರೀತಿಯಲ್ಲಿ ಮಾತ್ರ ನೀನು ಯುದ್ಧ ಮಾಡಬೇಕು. ಅಂದರೆ, ಯುದ್ಧ ಮಾಡುವುದರಿಂದಾಗುವ ಈ ಅನರ್ಥಗಳ ಹೊಣೆಯು ನಿನ್ನ ಮೇಲೆ ಬರುವುದಿಲ್ಲ. ಯುದ್ಧ ಕೃತ್ಯವನ್ನಷ್ಟೇ ಅಲ್ಲ, ಮನುಷ್ಯನು ಮಾಡುವ ಪ್ರತಿಯೊಂದು ಕೃತ್ಯವನ್ನೂ ಆತನು ಈ ರೀತಿಯಲ್ಲಿಯೇ ಮಾಡಬೇಕು. ಹಾಗೆ ಮಾಡಿದರೆ, ಅವುಗಳ ಪಾಪಪುಣ್ಯಗಳ ಲೇಪವು ಆತನಿಗೆ ಉಂಟಾಗುವುದಿಲ್ಲ." ಎಂಬುದೇ ಆ ಉತ್ತರದ ತಾತ್ಪರ್ಯ. ಇನ್ನು ಗೀತೆಯು ಹೇಳುವ ಆ ರೀತಿಯು ಅಥವಾ ಬಗೆಯು ಯಾವುದು? ಸ್ಥಿತಪ್ರಜ್ಞನಾಗಿ, ಅಪರೋಕ್ಷಜ್ಞಾನಿಯಾಗಿ, ಯೋಗಾರೂಢನಾಗಿ, ಪರಮಾತ್ಮ ಭಕ್ತನಾಗಿ ಮತ್ತು ಗುಣಾತೀತನಾಗಿ ನೀನು ಈ ಯುದ್ಧವನ್ನು ಮಾಡು, ಎಂದರೆ ನಿನಗೆ ಪಾಪಲೇಪವಿಲ್ಲ ಎಂಬುದೇ ಗೀತೆಯು ಹೇಳಿದ ಆ ರೀತಿಯು. ಇವೆಲ್ಲವುಗಳಲ್ಲಿ ಅಲ್ಪಸ್ವಲ್ಪ ಭೇದಗಳಿದ್ದರೂ ಒಟ್ಟಿನಮೇಲೆ ಅವೆಲ್ಲವೂ ಒಂದೇ ಎಂದು ಹೇಳಲು

ಅಡ್ಡಿಯಿಲ್ಲ. ಆ ಸ್ಥಿತಿಗೆ ಈಗ ಜೀವನ್ಮುಕ್ತ ಸ್ಥಿತಿಯೆಂದು ಕರೆಯುವ ಪರಿಪಾಠಬಿದ್ದಿದೆ. ಗೀತೆಯ ಉಪದೇಶವೆಲ್ಲವೂ ಇಂಥ ಮನಃಸ್ಥಿತಿಯನ್ನು ಮನುಷ್ಯನು ಹೇಗೆ ಸಂಪಾದಿಸಬೇಕೆಂಬುದನ್ನು ಬೋಧಿಸುವುದಕ್ಕೋಸ್ಕರ ಇರುತ್ತದೆ. ಗೀತೆಯನ್ನೋದುವಾಗ ನಾವು ನಮ್ಮ ಇಡೀ ದೃಷ್ಟಿಕೋನವನ್ನೇ ಬದಲುಮಾಡಬೇಕಾಗುತ್ತದೆ. ಇಷ್ಟರಿಂದ, ವಾಚಕರಿಗೆ ಗೀತೆಯ ಮರ್ಮವು ತಿಳಿಯುವುದು ಶಕ್ಯವಿಲ್ಲವೆಂಬುದನ್ನು ನಾವು ಅರಿತಿದ್ದೇವೆ, ಹಾಗೆ ಅದು ತಿಳಿಯುವಂತಿದ್ದರೆ, ಮುಂದಿನ ಗ್ರಂಥದ ಆವಶ್ಯಕತೆಯೇ ಉಳಿಯುತ್ತಿದ್ದಿಲ್ಲ. ಆದರೂ, ಇದರಿಂದ ಶ್ರೀಕೃಷ್ಣನ ಉತ್ತರದ ದಿಶೆಯು ಗೊತ್ತಾಗಲಿಕ್ಕೆ ಅಡ್ಡಿ ಇಲ್ಲ.

ಗೀತೋಪದೇಶವು ಶ್ರೀಕೃಷ್ಣನ ಅನೇಕ ಲೀಲಾವಿನೋದಗಳಲ್ಲಿ ಒಂದು ಲೀಲಾವಿನೋದವು. ಇದರಲ್ಲಿ, ಆತನು ಕಾಣಲಿಕ್ಕೇನೋ ಅತ್ಯಂತ ಕ್ರೂರನಾಗಿ ಕಾಣುತ್ತಾನೆ. ಶ್ರೀಕೃಷ್ಣನು ಇದರಲ್ಲಿ ಹಾಕಿಕೊಂಡ ವೇಷವು ಸಾರಥಿಯ ವೇಷವು. ತನ್ನ ಸ್ವಂತ ಕೈಯಲ್ಲಿ ಅಸ್ತ್ರವಿಲ್ಲ ಶಸ್ತ್ರವಿಲ್ಲ; ಕುದುರೆಗಳ ಕಡಿವಾಣವಿದೆ. ಮುಂದೆ, ಭಯಂಕರವಾದ ಶಸ್ತ್ರಾಸ್ತ್ರಗಳಿಂದ ಸಜ್ಜರಾದ ರಥಿಕರು ನಿಂತಿದ್ದಾರೆ. ಅಂಥ ವಿಷಮ ಸಮಯದಲ್ಲಿ ಆತನು ಅರ್ಜುನನಿಗೆ ವೇದಾಂತದ ಉಪದೇಶ ಮಾಡಲು ಹೊರಟಿರುವನು. ಆತನು ಘೋರ ವೇದಾಂತಿಯು, ನಿರ್ದಯನಾದ ತತ್ವಜ್ಞಾನಿಯು, ಕರುಣೆಯಿಂದ ಹಿಂಜರಿದು ನಿಂತ ಅರ್ಜುನನನ್ನು ಹಿಂಸೆಗೆ ನೂಕುವ ಕಠೋರನಾದ ತತ್ವಜ್ಞಾನಿಯು. ಆತನಿಗೆ ರಕ್ತದ ಅಂಜಿಕೆಯಿಲ್ಲ, ಕೊಲೆಯ ಹೇಸಿಕೆಯಿಲ್ಲ, ಸಾವಿನ ಪರಿವೆಯಿಲ್ಲ. ಇಷ್ಟು ಕ್ರೂರವಾದ ಉಪದೇಶವನ್ನು ಮಾಡಿ, ಅದನ್ನು ಸಮರ್ಥಿಸುವ ಧೈರ್ಯವು ಆತನಿಗೆ ಎಲ್ಲಿಂದ ಉಂಟಾಯಿತು? ಇದರ ಗೂಢವನ್ನು ತಿಳಿಯುವುದೆಂದರೇನೇ ಗೀತೆಯ ಗುಟ್ಟನ್ನು ಅರಿತುಕೊಳ್ಳುವುದು. ನಾವು ಮೇಲೆ ಹೇಳಿದಂತೆ, ಒಂದು ವಿಶಿಷ್ಟವಾದ ಮನಃಸ್ಥಿತಿಯನ್ನು ಸಂಪಾದಿಸಿಕೊಂಡು, ಅಂಥ ಸ್ಥಿತಿಯಲ್ಲಿ ಯುದ್ಧವನ್ನಷ್ಟೇ ಅಲ್ಲ, ಪ್ರತಿಯೊಂದು ಕೃತ್ಯವನ್ನು ಮನುಷ್ಯನು ಮಾಡಬೇಕೆಂದು ಗೀತೆಯು ಉಪದೇಶಿಸುತ್ತದೆ. ಆ ಮನಃಸ್ಥಿತಿಗೆ ಜೀವನ್ಮುಕ್ತಾವಸ್ಥೆಯೆಂದು ಎನ್ನಬಹುದು. ಇದೇ ಗೀತೆಯ ಉತ್ತರದ ಇಂಗಿತ. ಅಂಥ ಮನಃಸ್ಥಿತಿಯನ್ನಿಟ್ಟುಕೊಂಡು, ಜಗಚ್ಚಕ್ರದ ಕಡೆಗೆ ಲಕ್ಷವನ್ನಿಟ್ಟು, ಪರಮಾತ್ಮನ ಸೇವೆಯೆಂದು ಯುದ್ಧ ಮಾಡಿದರೆ ಪಾಪವಿಲ್ಲವೆಂಬುದೇ ಶ್ರೀಕೃಷ್ಣನ ಉಪದೇಶದ ಮಥಿತಾರ್ಥ. ಜಗಚ್ಚಕ್ರದ ಕಡೆಗೆ, ಆ ಸಂಸಾರಪ್ರವಾಹದ ಕಡೆಗೆ ಅರ್ಜುನನ ಲಕ್ಷವು ಹೋಗದಿರುವುದೇ ಆತನ ವಿಚಾರಸರಣಿಯಲ್ಲಿಯ ದೊಡ್ಡದೋಷ. ಆ ಮಹಾಪ್ರವಾಹವನ್ನು ಲಕ್ಷದಲ್ಲಿ ತಂದರೆ, ಈ ಯುದ್ಧವು ಅದರಲ್ಲಿ ತೇಲಿಹೋಗುವ ಒಂದು ಮುಳ್ಳುಕಂಟಿಯು. ಇಂಥ ಎಷ್ಟು ಮುಳ್ಳು ಕಂಟಿಗಳು ಆ ಮಹಾಕಾಲನ ಪ್ರವಾಹದಲ್ಲಿ ಹರಿದುಹೋಗಿವೆಯೋ? ಅದಕ್ಕಾಗಿ ಅರ್ಜುನನು ದುಃಖಿಸುವ

ಕಾರಣವಿಲ್ಲ. ಹೀಗೆ ಈ ಮುಳ್ಳುಕಂಟಿಗಳೆಲ್ಲವೂ ಹರಿದುಹೋಗಲೇಬೇಕೆಂದು ಆತನ ಸಂಕಲ್ಪ. ಆಗಿನ ಕಾಲವು ಅಂಥ ಕಾಲವಾಗಿತ್ತು. ಅರ್ಜುನನು ಅದಕ್ಕೆ ತಕ್ಕ ಸಾಧನನಾಗಿದ್ದನು. ಅಂತಲೇ, ಅರ್ಜುನನಿಗೆ ಯುದ್ಧದ ಉಪದೇಶ. ಒಟ್ಟಿಗೆ ಹೇಳುವುದಾದಲ್ಲಿ ಮನುಷ್ಯನು ಮುಕ್ಕಣ್ಣನಾಗಬೇಕು. ತನ್ನ ಸ್ವಂತದ ಕಡೆಗೆ ದೃಷ್ಟಿ ಇಡಬೇಕು. ಜಗಚ್ಚಕ್ರದ ಕಡೆಗೆ ದೃಷ್ಟಿ ಇಡಬೇಕು. ಅಲ್ಲದೆ, ಮೋಕ್ಷದ ಕಡೆಗೆ ದೃಷ್ಟಿ ಇಡಬೇಕು. ಮಿಕ್ಕ ಧರ್ಮಗಳು ಅಥವಾ ನೀತಿ ಪಂಥಗಳು ಬಹುಶಃ ಮೊದಲಿನ ಎರಡು ಕಣ್ಣುಗಳನ್ನು ಕೊಡುತ್ತವೆ. ಸನಾತನ ಧರ್ಮವೊಂದೇ ಮೂರನೆಯದೊಂದು ಕಣ್ಣನ್ನು ತೆರೆಯುತ್ತದೆ. ಸ್ವರ್ಗದ ಆಚೆಗೆ ಮಿಕ್ಕ ಧರ್ಮಗಳ ದೃಷ್ಟಿ ಹೋಗುವುದಿಲ್ಲ.

ಮಿಕ್ಕ ನೀತಿಪಂಥಗಳು ಅಥವಾ ಧರ್ಮಗಳು ಕೊಡುವ ಉತ್ತರಗಳನ್ನು ಊಹಿಸಬಹುದು. ನೀತಿಪಂಥಗಳು ಈ ಪ್ರಶ್ನೆಯನ್ನು ಕೇವಲ ಸಾಮಾಜಿಕ, ರಾಜಕೀಯ ಅಥವಾ ನೈತಿಕ ದೃಷ್ಟಿಯಿಂದ ಬಿಡಿಸುತ್ತವೆ. ಸಮಾಜಹಿತ, ಸರ್ವಭೂತಹಿತ, ರಾಷ್ಟ್ರಕಲ್ಯಾಣ, ಜನತಾಜನಾರ್ದನನ ಸೇವೆ, ಬಹುಜನರ ಬಹುಹಿತ ಇವೇ ಮುಂತಾದ ಧ್ಯೇಯಗಳನ್ನಿಟ್ಟು ಆಯಾ ಪರಿಸ್ಥಿತಿಯ ಪ್ರಕಾರ ಯುದ್ಧ ಮಾಡುವುದಕ್ಕೆ ಅಥವಾ ಬಿಡುವುದಕ್ಕೆ ಅವು ಹೇಳುತ್ತಿದ್ದವು. ಜಗತ್ತಿನಲ್ಲಿ ಯುದ್ಧದ ಬೇರನ್ನೇ ಕಡಿದೊಗೆಯಲಿಕ್ಕೆಂದು ತೋರಗಾಣಿಕೆಯ ಉದ್ದೇಶವನ್ನಾದರೂ ಇಟ್ಟುಕೊಂಡ ಶಾಂತಿಸಂಘದವರು ಅರ್ಜುನನು ಶಾಂತಿವೀರನೆಂದು ಆತನನ್ನು ತಲೆಯ ಮೇಲೆ ಎತ್ತಿಕೊಂಡು ಕುಣಿಯುತ್ತಿದ್ದರು. ಕೃಷ್ಣನು ಹಿಂಸೆಯನ್ನು ಎಂದಿಗಾದರೂ ಉಪದೇಶಿಸುತ್ತಿರಬಹುದೇ ಎಂದು ಶಂಕಿಸಿ, ಅಹಿಂಸಾವಾದಿಗಳು ಗೀತೆಯು ಹೇಳುವ ಯುದ್ಧವು ಮಾನಸಿಕ ಯುದ್ಧವೆಂದು ಹಾರುತ್ತರವನ್ನು ಹೇಳಬಹುದು. ಆದರೆ, ಇವೆಲ್ಲವೂ ತಪ್ಪು ದಾರಿಗಳು. ಗೀತೆಯ ಉತ್ತರವು ಇವೆಲ್ಲ ಉತ್ತರಗಳಿಂದ ಭಿನ್ನವಾಗಿದೆ. ಅದು ಆ ಪ್ರಶ್ನೆಯ ಕಡೆಗೆ ನೋಡುವ ದೃಷ್ಟಿಕೋನವೇ ಬೇರೆಯಾಗಿದೆ.

ಇದರಿಂದ ಗೊತ್ತಾಗುವುದೇನೆಂದರೆ, ಗೀತೆಯಲ್ಲಿ ಅರ್ಜುನನಿಗೆ ಮಾಡಿದ ಉಪದೇಶವು ಯುದ್ಧಮಾಡು ಎಂದು ಇದ್ದರೂ ಯಾವಾಗಲೂ ಯುದ್ಧವನ್ನೇ ಮಾಡಬೇಕೆಂಬ ಸಿದ್ಧಾಂತವನ್ನು ಮಾಡುವುದು ಕೃಷ್ಣನ ಉದ್ದೇಶವಲ್ಲ. ಆಗಿನ ಕಾಲಕ್ಕೆ, ಅರ್ಜುನನ ಸ್ವಭಾವಕ್ಕೆ ಅಥವಾ ಸ್ವಧರ್ಮಕ್ಕೆ, ತಕ್ಕಂತೆ ಯುದ್ಧ ಮಾಡೆಂದು ಹೇಳುವುದು ಅವಶ್ಯವಾಗಿತ್ತು. ಆದಕಾರಣ, ಶ್ರೀಕೃಷ್ಣನು ಆತನಿಗೆ ಅದನ್ನು ಉಪದೇಶಿಸಿದನು. ಅದು ಸಾರ್ವಕಾಲಿಕ, ಸಾರ್ವದೇಶಿಕ, ಅಥವಾ ಸಾರ್ವಪ್ರಾಣಿಕ ಉಪದೇಶವಲ್ಲ. ಸರ್ವಕಾಲಕ್ಕೂ ಸರ್ವದೇಶಕ್ಕೂ ಸರ್ವಪ್ರಾಣಿಗಳಿಗೂ ಅನ್ವಯಿಸುವ ಉಪದೇಶವೆಂದರೆ ಮನುಷ್ಯನು ಸ್ಥಿತಪ್ರಜ್ಞನಾಗಬೇಕು, ಸ್ವಧರ್ಮಕ್ಕೆ ಅಂದರೆ ತನ್ನ ಮೂಲಸ್ವಭಾವಕ್ಕೆ ತಕ್ಕ ಕೃತ್ಯವನ್ನು ಮಾಡಬೇಕು, ಮತ್ತು ಅದನ್ನು ಪರಮಾತ್ಮನ ಸೇವೆಯೆಂಬ

ಭಾವನೆಯಿಂದ ಮಾಡಬೇಕು. ಗೀತೆಯು ಯಾವ ಕೃತ್ಯವು ಚಲೋದು, ಯಾವ ಕೃತ್ಯವು ಕೆಟ್ಟದು ಎಂಬುದನ್ನು ಹೆಚ್ಚಿಗೆ ಹೇಳಿರುವುದಿಲ್ಲ. ಪ್ರತಿಯೊಂದು ಕೃತ್ಯವನ್ನು ಹೇಗೆ ಮಾಡಬೇಕೆಂಬುದನ್ನೇ ಹೆಚ್ಚಿಗೆ ವಿವರಿಸುತ್ತದೆ. ಗಣಿತ ಶಾಸ್ತ್ರದ ಭಾಷೆಯಲ್ಲಿ ಹೇಳುವುದಾದಲ್ಲಿ, ಶ್ರೀಕೃಷ್ಣನು ಗಣಿತದ ಉದಾಹರಣೆಗಳನ್ನು ಬಿಡಿಸಲಿಕ್ಕೆ ಹೋಗಿರುವುದಿಲ್ಲ. ಆ ಲೆಕ್ಕಗಳನ್ನು ಬಿಡಿಸುವ ರೀತಿಯನ್ನಷ್ಟೇ ಹೇಳಿದ್ದಾನೆ. ಆ ರೀತಿಯನ್ನು ಹಚ್ಚಿ, ಅವರವರು ಆಯಾ ಕಾಲಕ್ಕೆ ಮತ್ತು ತಮ್ಮ ಸ್ವಭಾವಕ್ಕೆ ತಕ್ಕಂತೆ ಲೆಕ್ಕಗಳನ್ನು ಬಿಡಿಸಿದರೆ ಸರಿಯಾದ ಉತ್ತರವು ದೊರೆಯುವುದು. ಸಾರಾಂಶ, ಗೀತೆಯಲ್ಲಿ ಏನು ಮಾಡಬೇಕೆಂಬುದಕ್ಕೆ ಮುಖ್ಯವಾಗಿ ಉತ್ತರವಿರದೆ, ಹೇಗೆ ಮಾಡಬೇಕೆಂಬುದಕ್ಕೆ ಮುಖ್ಯವಾಗಿ ಉತ್ತರವಿದೆ.

ಶ್ರೀಕೃಷ್ಣನು ಕೊಟ್ಟ ಈ ಉತ್ತರದ ದಿಶೆಯನ್ನು ಲಕ್ಷದಲ್ಲಿ ಇಟ್ಟರೆ, ಗೀತೆಯು ಇಡೀ ಮಾನವಜನಾಂಗದ ಜೀವನದ ಪ್ರಶ್ನೆಯನ್ನು ಸಮೂಲವಾಗಿ ಬಿಡಿಸಿರುತ್ತದೆಂಬುದು ವಾಚಕರ ಲಕ್ಷಕ್ಕೆ ಸ್ಥೂಲಮಾನದಿಂದ ಬಂದಿರಲಿಕ್ಕೆ ಸಾಕು.

# ಮಹಾಭಾರತದ ಮಹತ್ವ ಅದರಲ್ಲಿ ಗೀತೆಯ ಸ್ಥಾನ

ಬೊಂಬೆಯಾಟವನಾಡಿಸಿದೆ ಮಹಾಭಾರತವ || ಪ ||
ಅಂಬುಜಭವಾದಿ ಅಮರರು ನೋಡುತಿರಲು || ಅ ||
ಕುರುಭೂಮಿಯೆಂಬ ಪುರವೀಥಿಯನು ವಿರಚಿಸಿ
ಮರೆಯ ಮಾಯದ ಐದು ತೆರೆಯ ಹಾಕಿ |
ಧರಣೀಶರೆಂಬ ನರಪ್ರತಿಮೆಗಳ ಅಳವಡಿಸಿ
ನರನ ರಥವಾಜಿಯ ಸೂತ್ರವನೆ ಹಿಡಿದು || ೧ ||
ಓದುವವನು ನಾರದನು ವಾದ್ಯಗಾರನು ಶಂಭು
ಬಾದರಾಯಣದೇವ ಕಥಾಪ್ರಸಂಗಿ
ಮೇದಿನಿಯ ಹೊರೆಗಳೆವ ಮೃತ್ಯುವಿನ ಹಾಸ್ಯರಸ
ವೇದನಿಕರಗಳು ಕೈವಾರಿಸುತ್ತಿರಲು || ೨ ||
ಹದಿನೆಂಟು ಅಕ್ಷೋಹಿಣೀ ಮಾರ್ಬಲವ ನೆರೆಸಿ
ಹದಿನೆಂಟು ದಿನ ಕದನನಾಟ್ಯವ ನಡಿಸಿ
ಅದರೊಳ್ಳೈವರನುಳಿಸಿ ಭೂಮಿಭಾರವನಿಳಿಸಿ
ಮುದದಿ ಬ್ರಹ್ಮಕಪಾಲವನು ತೃಪ್ತಿಗೊಳಿಸಿ || ೩ ||
ಲೋಕದೊಳಗಿದನ್ನೈದನೆಯ ವೇದವೆಂದೆನಿಸಿ
ಪಾಕಶಾಸನ ಸಭೆಯನು ಮೆಚ್ಚಿಸಿ
ಈ ಕಥೆಯ ಕೇಳೋ ಜನಮೇಜಯನ ಪತಿಕರಿಸಿ
ತಾ ಕಪಟನಾಟಕ ಸೂತ್ರಧರನೆನಿಸಿ

-ಕನಕದಾಸರು.

ಶ್ರೀಕೃಷ್ಣನ ಉತ್ತರದ ದಿಶೆಯನ್ನು ಹಿಂದಿನ ಪ್ರಕರಣದಲ್ಲಿ ಹೇಳಿದ್ದೇವಷ್ಟೆ. ಅದನ್ನು ವಿಸ್ತಾರಗೊಳಿಸುವದಕ್ಕೆ ಮುಂಚೆ, ಗೀತೆಯ ಸಂಬಂಧವಾಗಿ ತಿಳಿಯತಕ್ಕ ಕೆಲವು ಅವಾಂತರ

ವಿಷಯಗಳನ್ನು ಹೇಳುವುದು ಉಚಿತವು. ಇಲ್ಲಿ, ಭಾರತದ ಮಹತ್ವವನ್ನೂ ಗೀತೆಗೆ ಅದರಲ್ಲಿ ಇರತಕ್ಕ ಸ್ಥಾನವನ್ನೂ ಕುರಿತು ಬರೆಯುತ್ತೇವೆ.

ಮಹಾಭಾರತವು ಹಿಂದುಸ್ಥಾನದ ವಾಙ್ಮಯದಲ್ಲಿ-ಅದೇಕೆ, ಜಗತ್ತಿನ ವಾಙ್ಮಯದಲ್ಲಿಯೇ, ಒಂದು ಅತ್ಯಪೂರ್ವವಾದ ಗ್ರಂಥವು. ಮೊದಲು ಚಿಕ್ಕದಾಗಿದ್ದ ಗ್ರಂಥವು ಬೆಳೆಬೆಳೆಯುತ್ತ ಈಗಿನ ಮಹಾಭಾರತವಾಗಿದೆಯೆಂದು ಕೆಲವರು; ಅದು ಐತಿಹಾಸಿಕ ಗ್ರಂಥವೇ ಅಲ್ಲ, ಕೇವಲ ಕವಿಕಲ್ಪಿತವಾದ ಗ್ರಂಥವೆಂದು ಕೆಲವರು; ಅದು ಐತಿಹಾಸಿಕ ಕಾದಂಬರಿಯೆಂದು ಕೆಲವರು-ಹೀಗೆ ಅದರ ವಿಷಯವಾಗಿ ನಾನಾ ವಾದಗಳಿರುತ್ತವೆ. ಅವೆಲ್ಲವೂ ಸದ್ಯಕ್ಕೆ ಅಪ್ರಸ್ತುತ. ಅದೇಮೇರೆಗೆ, ಅದರಲ್ಲಿ ಅನೇಕ ಶ್ಲೋಕಗಳು ಪ್ರಕ್ಷಿಪ್ತವಾಗಿರುತ್ತವೆಂದೂ ಅನೇಕರು ಅನ್ನುತ್ತಾರೆ. ಈ ಕೊನೆಯ ಮಾತನ್ನು ಈಗಿನವರೇ ಅನ್ನುತ್ತಾರೆಂದಲ್ಲ, ಹಿಂದಕ್ಕೆಯೇ ಶ್ರೀಮಧ್ವಾಚಾರ್ಯರು ಈ ಆಕ್ಷೇಪವನ್ನೆತ್ತಿರುತ್ತಾರೆ. ಇಷ್ಟೇ ಅಲ್ಲ, ಅವರು ದೇಶದಲ್ಲೆಲ್ಲ ತಿರುಗಿ, ಮಹಾಭಾರತದ ಅನೇಕ ಹಸ್ತಲಿಖಿತ ಪ್ರತಿಗಳನ್ನು ಹುಡುಕಿ, ಸಂಶೋಧನದೃಷ್ಟಿಯಿಂದ ಅವನ್ನು ಶೋಧಿಸಿ, ತುಲನೆಮಾಡಿ ತಮಗೆ ಸರಿದೋರಿದ ಮಥಿತಾರ್ಥವನ್ನು ತೆಗೆದು ಮಹಾಭಾರತ ತಾತ್ಪರ್ಯನಿರ್ಣಯವೆಂಬ ಗ್ರಂಥವನ್ನು ಬರೆದಿದ್ದಾರೆ. ಮಹಾಭಾರತವನ್ನು ಸಂಶೋಧನದೃಷ್ಟಿಯಿಂದ ಓದಿದವರಲ್ಲಿ ಇವರೇ ಮೊದಲನೆಯವರೆಂದು ಹೇಳಬಹುದು. ಇರಲಿ. ಈ ಗ್ರಂಥದ ಮಟ್ಟಿಗೆ ಆ ವಿಷಯವೂ ಸದ್ಯಕ್ಕೆ ಅಪ್ರಸ್ತುತ. ಏಕೆಂದರೆ, ಈ ಗ್ರಂಥದಲ್ಲಿ ನಮಗೆ ತಿಳಿದುಕೊಳ್ಳಬೇಕಾಗಿರುವುದು ಗೀತೆಯ ಪರಿಮಳ. ಗೀತೆಯ ಪರಿಮಳವೆಂದರೂ ಒಂದೇ, ಭಾರತದ ಪರಿಮಳವೆಂದರೂ ಒಂದೇ. ಭಾರತದ ಸಾರವೇ ಗೀತೆಯು. ಒಟ್ಟಿನಲ್ಲಿ ಮಹಾಭಾರತದ ಸಾರವೇನೆಂಬುದನ್ನರಿಯುವುದಕ್ಕೆ ಮೇಲ್ಕಾಣಿಸಿದ ವಾದಗಳು ಅಡ್ಡಬರಲಾರವು. ಇದಲ್ಲದೆ, ಮತ್ತೂ ಒಂದು ಕಾರಣದ ಸಲುವಾಗಿ, ಆ ಪ್ರಶ್ನೆಗಳಿಗೆ ವಿಶೇಷ ಮಹತ್ವವಿರುವುದಿಲ್ಲ. ಅದಾವುದೆಂದರೆ, ಮಹಾಭಾರತಕ್ಕೆ ಅನೇಕ ಅರ್ಥಗಳಿರುತ್ತವೆಂದು ಹಿಂದಿನಿಂದಲೂ ತಿಳವಳಿಕೆಯುಂಟು. ಭಾರತಕ್ಕೆ ಹತ್ತು ಅರ್ಥಗಳಿರುತ್ತವೆಂದೂ ಅವೆಲ್ಲವೂ ಮಾನವರಿಗೆ ತಿಳಿಯುವುದಿಲ್ಲವೆಂದೂ ಅವುಗಳಲ್ಲಿ ಮೂರು ಅರ್ಥಗಳು ಅತಿ ಮುಖ್ಯವಾದವುಗಳೆಂದೂ ಸ್ಕಾಂದ ಮತ್ತು ನಾರದ ಪುರಾಣಗಳಲ್ಲಿ ಹೇಳಿರುವುದು. ಆ ಮೂರು ಅರ್ಥಗಳನ್ನು ಹೇಗೆ ಹಚ್ಚಬೇಕೆಂಬುದನ್ನು ಶ್ರೀಮಧ್ವಾಚಾರ್ಯರು ದಿಗ್ದರ್ಶನಾರ್ಥವಾಗಿ ಹಚ್ಚಿ ಸಹ ತೋರಿಸಿರುವರು. ಇದರಿಂದಲೂ ಮೇಲಿನ ವಾದಗಳ ಮಹತ್ವವು ಎಷ್ಟೋಮಟ್ಟಿಗೆ ಕಡಿಮೆಯಾಗುತ್ತದೆ. ಅವರವರು ಅವರವರಿಗೆ ತೋರಿದ ಅರ್ಥವನ್ನು ಹಚ್ಚಿಕೊಂಡು ತಮ್ಮ ಮನಸ್ಸಿನ ಸಮಾಧಾನವನ್ನು ಮಾಡಿಕೊಳ್ಳಬಹುದು. ಆದಕಾರಣ, ಮಹಾಭಾರತವು ನಿಜವಾದ ಇತಿಹಾಸವಿರಲಿ, ಕಾಲ್ಪನಿಕ ಕಥೆ ಇರಲಿ, ಅಥವಾ ಐತಿಹಾಸಿಕ ಕಾದಂಬರಿ ಇರಲಿ, ಅದರಲ್ಲಿ ಅನೇಕ

ಶ್ಲೋಕಗಳು ಪ್ರಕ್ಷಿಪ್ತವಾಗಿ ಇರಲಿ, ಹೇಗಿದ್ದರೂ ಒಟ್ಟಿನ ಮೇಲೆ ಮಹಾಭಾರತಕ್ಕೆ ಇರುವ ಗೌರವಕ್ಕೆ ಏನೂ ಕುಂದುಂಟಾಗುವುದಿಲ್ಲ. ಅದು ಪ್ರಮಾಣ ಗ್ರಂಥವು-ಹಿಂದೂ ಸಂಸ್ಕೃತಿಯ ಕಣಿಯು-ಹಿಂದೂ ವಿಚಾರಗಳ ಬೀಡು-ಹಿಂದೂ ಪರಂಪರೆಗಳ ನಿಧಾನವು-ಹಿಂದುತ್ವದ ನಿಶಾನೆಯು-ಎಂಬುದು ಸಾಮಾನ್ಯವಾಗಿ ಎಲ್ಲರೂ ಒಪ್ಪಬಹುದಾದ ಸಂಗತಿಯಾಗಿದೆ.

ಈ ಮಹಾಭಾರತದ ಗೌರವವು ನಾರದ, ಉಪನಾರದ, ಬ್ರಹ್ಮಾಂಡ, ಮಾರ್ಕಂಡೇಯ, ವಾಯು, ಸ್ಕಾಂದ, ಕೂರ್ಮ, ವರಾಹ ಮುಂತಾದ ಅನೇಕ ಪುರಾಣಗಳಲ್ಲಿ ಬಂದಿದೆ. ಅವುಗಳಲ್ಲಿ, ಭಾರತವು ಸರ್ವಶಾಸ್ತ್ರಗಳ ಸಾರವೆಂದೂ ಸ್ತ್ರೀಶೂದ್ರಾದಿಗಳಿಗೆಲ್ಲರಿಗೂ ಅದನ್ನು ತಿಳಿಯುವುದಕ್ಕೆ ಅಧಿಕಾರವಿರುತ್ತದೆಂದೂ ಹೇಳಿದೆ. ಅಲ್ಲದೆ, ಇದರಲ್ಲಿ, ಸ್ವಂತ ಈಶ್ವರಜ್ಞಾನಕ್ಕೆ ಮಾತ್ರವೇ ಗೋಚರವಾದ ಆದರೆ ಮಾನವ ಇಂದ್ರಿಯಗಳ ಜ್ಞಾನಕ್ಕೆ ಅಗೋಚರವಾದ ವಿಷಯಪ್ರತಿಪಾದನೆಯುಂಟು. ಉದಾ: ಗೀತೆಯಲ್ಲಿ ಶ್ರೀಕೃಷ್ಣನು 'ನಾನು ಈ ಜ್ಞಾನವನ್ನು ಹೇಳುತ್ತೇನೆಂದು ನೀನು ಅದನ್ನು ನಂಬು' ಎಂದು ಅನೇಕ ಕಡೆಗೆ ಹೇಳಿರುವನು. ಆದಕಾರಣ, ಒಂದು ಅರ್ಥದಲ್ಲಿ ಇದು ವೇದಕ್ಕಿಂತಲೂ ಹೆಚ್ಚಿನದಾಗುತ್ತದೆ. ವೇದಗಳಂತೆ ಇದು ಗಹನವಾಗಿರುವುದಿಲ್ಲ. ವೇದಗಳು ಅದೃಶ್ಯನಾದ ಪರಮಾತ್ಮನ ವಿಷಯವನ್ನು ಅಲ್ಪಬುದ್ಧಿಯಾದ ಮಾನವನ ಅವಗಾಹನೆಗೆ ತಂದುಕೊಡುವುದಕ್ಕೋಸ್ಕರ ಗೂಢೋಪಮೆ, ಪ್ರತೀಕಭಾಷೆ ಮುಂತಾದವುಗಳನ್ನು ಉಪಯೋಗಿಸಬೇಕಾಗುತ್ತದೆ. ವೇದಗಳಲ್ಲಿ, ಈಗ ಬಹುಶಃ ಲುಪ್ತವಾಗಿರುವ ಯಜ್ಞಯಾಗಾದಿಗಳ ವರ್ಣನೆ ಹೆಚ್ಚು. ಉಪನಿಷತ್ತುಗಳು, ಬ್ರಹ್ಮನ ಸ್ವರೂಪ, ಅಪರೋಕ್ಷ ಜ್ಞಾನ, ಅಮರತ್ವ ಮುಂತಾದ ಕಠಿಣ ವಿಷಯಗಳ ಬಗ್ಗೆ ಸ್ಥಿತಪ್ರಜ್ಞರಾದವರು ಸಮಾಧಿ ಸ್ಥಿತಿಯಲ್ಲಿ ತೆಗೆದ ಉದ್ಗಾರಗಳು. ಆದಕಾರಣ, ಅವು ಸಾಮಾನ್ಯರಿಗೆ ಉಪಯೋಗವಾಗುವ ಗ್ರಂಥಗಳಲ್ಲ. ಬ್ರಹ್ಮಸೂತ್ರಗಳಲ್ಲಿ ತರ್ಕಕ್ಕೆ ಪ್ರಾಧಾನ್ಯ ಹೆಚ್ಚು. ಅದು ಕೇವಲ ತತ್ವಜ್ಞಾನದ ಗ್ರಂಥ. ಆದರೆ ಮಹಾಭಾರತದ ಸ್ಥಿತಿ ಹಾಗಿರುವುದಿಲ್ಲ. ಅದು ಪಾಮರರಿಗಾಗಿ ಬರೆಯಲ್ಪಟ್ಟ ಗ್ರಂಥ; ವ್ಯಾವಹಾರಿಕ ಉದಾಹರಣೆಗಳಿಂದ ಬೋಧಪ್ರದವಾಗಿ ಮಾಡಲ್ಪಟ್ಟ ಗ್ರಂಥ; ನಿತ್ಯದ ಆಚರಣೆಗೆ ಉಪಯೋಗವಾಗುವ ಗ್ರಂಥ. ಇದರಲ್ಲಿ ಪರಮಾತ್ಮ ವಿಷಯಕ ಜ್ಞಾನವಿದ್ದರೂ ಚರ್ಚೆ ಇರುವುದಿಲ್ಲ. ಮನುಷ್ಯನು ತನ್ನ ಆಚರಣೆಯನ್ನು ಹೇಗೆ ಇಟ್ಟುಕೊಳ್ಳಬೇಕೆಂಬ ಬಗ್ಗೆ ನಿಯಮಗಳಿವೆ. ಇದು ಸಾಧನ ಶಾಸ್ತ್ರ, ಧರ್ಮಶಾಸ್ತ್ರ, ವ್ಯವಹಾರಶಾಸ್ತ್ರ, ಆಚಾರಶಾಸ್ತ್ರ, ಧರ್ಮಾ ಧರ್ಮಗಳನ್ನು ಹೇಳುವುದಕ್ಕೆ ಮನುಸ್ಮೃತ್ಯಾದಿ ಗ್ರಂಥಗಳಿದ್ದರೂ ಆ ಗ್ರಂಥಗಳಲ್ಲಿ ಧರ್ಮಾಧರ್ಮಗಳ ವಿವರಗಳು ಮಾತ್ರ ಬಂದಿವೆಯಲ್ಲದೆ, ಧರ್ಮಾಧರ್ಮಗಳ ವಿವೇಚನೆ ಬಂದಿರುವುದಿಲ್ಲ. ಇದು ಶುಷ್ಕವೇದಾಂತ ಗ್ರಂಥವಲ್ಲ, ವೇದಾಂತವನ್ನು ಪ್ರತ್ಯಕ್ಷ ಆಚರಣೆಗೆ ಹಚ್ಚಿ ತೋರಿಸುವ ಗ್ರಂಥ.

ಪ್ರತಿಯೊಬ್ಬನು ಸಾಧನಗಳ ಸೋಪಾನಗಳನ್ನು ಏರುತ್ತ ಏರುತ್ತ ಕೊನೆಗೆ ಮೋಕ್ಷವೆಂಬ ರಮ್ಯವಾದ ಉದ್ಯಾನದಲ್ಲಿ ವಿಹರಿಸುವುದಕ್ಕೆ ಹೇಗೆ ಹೋಗಬೇಕೆಂಬುದನ್ನು ಹೇಳುವ ಗ್ರಂಥ. ಈ ಗ್ರಂಥವನ್ನು ಪಾರಾಯಣಮಾಡುವ ಸಂಪ್ರದಾಯವು ಪುರಾತನ ಕಾಲದಿಂದಲೂ ಬಂದಿದೆ. ಜನಮೇಜಯನಿಗೆ ವೈಶಂಪಾಯನರು ಇದನ್ನು ಹೇಳಿದ್ದಾರೆ. ನಾರದರಂಥ ಪರಮಹಂಸರು ಕೂಡ ಇದನ್ನು ಅಧ್ಯಯನ ಮಾಡಿದರೆಂದು ನಂಬಿಗೆಯಿದೆ.

ಇದಲ್ಲದೆ, ಇದು ಪ್ರಮಾಣ ಗ್ರಂಥವು, ಎಂದರೆ ಇದರಲ್ಲಿ ಹೇಳಿದ ತತ್ವಗಳು ಸಂಪೂರ್ಣವಾಗಿ ಸತ್ಯವಿರುತ್ತವೆ. ಪ್ರಮಾಣ ಗ್ರಂಥವು ಯಾವುದೆಂಬುದನ್ನು ಚೆನ್ನಾಗಿ ತಿಳಿಯುವುದಕ್ಕೆ ಒರೆಗಲ್ಲುಗಳು ಎರಡು (೧) ಅಪೌರುಷೇಯತ್ವ (೨) ಆಪ್ತವಾಕ್ಯತ್ವ. ಮಹಾಭಾರತವು ವೇದಗಳಂತೆ ಅಪೌರುಷೇಯ ಗ್ರಂಥವಲ್ಲ; ಮಹಾಭಾರತದ ಪ್ರಾಮಾಣ್ಯವು ಅದು ಆಪ್ತವಾಕ್ಯವೆಂಬುದರ ಮೇಲೆ ಅವಲಂಬಿಸಿರುತ್ತದೆ. ಮಹಾಭಾರತವನ್ನು ರಚಿಸಿದವರಾದ ವೇದವ್ಯಾಸರು ನಮಗೆಲ್ಲರಿಗೂ ಪರಮ ಆಪ್ತರು. ಆಪ್ತರೆಂದರೆ ಯಾರು? ಯಥಾರ್ಥದರ್ಶಿಗಳು ಮತ್ತು ಯಥಾ ದೃಷ್ಟಾರ್ಥವಾದಿಗಳಾದವರು. ಎಂದರೆ, ತಾವು ಸತ್ಯವನ್ನು ಕಂಡಿರಬೇಕು, ಮತ್ತು ತಾವು ಕಂಡ ಸತ್ಯವನ್ನು ಇದ್ದಕ್ಕಿದ್ದಂತೆ ಲೋಕಕ್ಕೆ ತಿಳಿಸಿರಬೇಕು. ಹಾಗಿಲ್ಲದೆ, ಸ್ವತಃ ತಾವೇ ಸತ್ಯವನ್ನು ಕಾಣದೆ, ಸತ್ಯದ ಪ್ರಯೋಗಗಳನ್ನು ಮಾತ್ರ ಮಾಡುತ್ತಿರುವವರು ಅಥವಾ ರಾಜಕಾರಣಕ್ಕೋಸ್ಕರವಾಗಿಯಾಗಲಿ ಇಲ್ಲವೆ ಅನ್ಯಕಾರಣಕ್ಕೋಸ್ಕರವಾಗಿಯಾಗಲಿ ತಾವು ಕಂಡ ಸತ್ಯವನ್ನು ಇದ್ದಕ್ಕಿದ್ದಂತೆ ಹೇಳಿರದಿದ್ದರೆ ಅವರು ಆಪ್ತರೆನಿಸಲಾರರು. ಸತ್ಯವನ್ನು ಪ್ರತ್ಯಕ್ಷೀಕರಿಸಿಕೊಂಡವರಿಗೆ ಅಪರೋಕ್ಷಜ್ಞಾನಿಗಳೆನ್ನುತ್ತಾರೆ. ಅವರಲ್ಲಿ, ಅಜ್ಞಾನ, ಭ್ರಮ, ಸಂದೇಹಗಳಿಗೆ ಆಸ್ಪದವಿರುವುದಿಲ್ಲ. ಸತ್ಯವನ್ನು ಕಂಡವರು ಅದನ್ನು ಲೋಕಕ್ಕೆ ಹೇಳದಿದ್ದರೆ ಅದರ ಪ್ರಯೋಜನವೇನು? ಆದಕಾರಣ, ತಾವು ಕಂಡದ್ದನ್ನು ಕಂಡಂತೆ ಹೇಳುವವರಿಗೇನೇ ಆಪ್ತರೆನ್ನಬೇಕು. ಯಥಾರ್ಥದರ್ಶಿಗಳಾದವರು ಕೂಡ ಲೋಕಕ್ಕೆ ವಿಶೇಷ ಕಾರಣಗಳಿಗೋಸ್ಕರ ಅಯಥಾರ್ಥವನ್ನು ಹೇಳುವುದುಂಟು. ಪ್ರಮಾದದಿಂದ ಹಾಗೆ ಅಯಥಾರ್ಥವನ್ನು ಹೇಳಿರುವ ಸಂಭವವಿದೆ, ಅಥವಾ ಕೇಳುವವರೇ ಅಯೋಗ್ಯರಿದ್ದರೆ, ಪೂರ್ಣ ಸತ್ಯವನ್ನು ಹೇಳದಿರುವ ಸಂಭವವಿದೆ, ಅಥವಾ ಕೇಳುವವರು ವಂಚನಬುದ್ಧಿಯುಳ್ಳವರಾಗಿದ್ದರೆ ಅಂಥವರಿಗೆ ಅಡ್ಡದಾರಿಗೆ ಹಚ್ಚುವುದಕ್ಕೋಸ್ಕರ ಅಂದರೆ ವಿಪ್ರಲಂಭಕ್ಕೋಸ್ಕರ ಸತ್ಯವನ್ನು ಹೇಳದಿರುವ ಸಂಭವವಿದೆ. ಇಲ್ಲವೆ, ಪ್ರಸಂಗವೇ ವಿನೋದದ ಅಥವಾ ಅಪಹಾಸಮಾಡುವ ಪ್ರಸಂಗವಿದ್ದರೆ ಹಾಗೆಮಾಡುವ ಸಂಭವವಿದೆ. ಆದರೆ ಮಹಾಭಾರತವನ್ನು ವೇದವ್ಯಾಸರು ಇಂಥ ಯಾವ ಉದ್ದೇಶದಿಂದಲೂ ರಚಿಸಿರುವುದಿಲ್ಲ. ಜಗತ್ತಿನಲ್ಲಿ ಸತ್ಯಜ್ಞಾನವು ಲೋಪವಾಗಿ, ಸಂಸಾರದಲ್ಲಿ ಕ್ಲೇಶಪಡುತ್ತಿರುವ

ಸಜ್ಜನರನ್ನು ನೋಡಿ ಅವರಿಗೆ ಧರ್ಮಜ್ಞಾನಗಳ ದ್ವಾರಾ ಮೋಕ್ಷ ಸಿಕ್ಕಬೇಕೆಂಬ ಉದಾತ್ತವಾದ ಉದ್ದೇಶದಿಂದ ವೇದವ್ಯಾಸರು ಇದನ್ನು ರಚಿಸಿರುವರು. ಆದ ಕಾರಣ ಅದು ಗಂಭೀರ ಪ್ರಸಂಗವು, ತತ್ತ್ವನಿರ್ಣಯ ಪ್ರಸಂಗವು. ವಿಪ್ರಲಂಭಕ್ಕಾಗಲಿ, ವಿನೋದಕ್ಕಾಗಲಿ ಇಲ್ಲಿ ಅವಕಾಶವಿಲ್ಲ.

ಹೀಗೆ, ನಾವು ಮುಂಚೆ ಭಾರತಕ್ಕೇನೇ ಪ್ರಾಮಾಣ್ಯವನ್ನು ಪ್ರಸ್ಥಾಪಿಸುವುದಕ್ಕೆ ಕಾರಣವೇನೆಂದರೆ ಗೀತೆಯು ಭಾರತದ ಒಂದು ಭಾಗಮಾತ್ರವು. ಆದಕಾರಣ, ಭಾರತಕ್ಕೆ ಪ್ರಾಮಾಣ್ಯವನ್ನು ಹೇಳದೆ, ಅದರ ಒಂದು ಭಾಗಕ್ಕೆ ಮಾತ್ರವೇ ಪ್ರಾಮಾಣ್ಯವನ್ನು ಹೇಳುವುದು ಸರಿಯಾಗಲಾರದು. ಗೀತೆಯು ಕೃಷ್ಣನ ಉಪದೇಶವಾದುದರಿಂದ ಅದು ಪ್ರಮಾಣವು ಎಂದು ಹೇಳುವುದೂ ಸರಿಯಲ್ಲ. ಏಕೆಂದರೆ ಗೀತೆಯನ್ನು ರಚಿಸಿದವರು ವೇದವ್ಯಾಸರು, ಶ್ರೀಕೃಷ್ಣನಲ್ಲ. ಶ್ರೀಕೃಷ್ಣನು ಅರ್ಜುನನಿಗೆ ಮಾಡಿದ ಉಪದೇಶವು ಒಂದಕ್ಷರವೂ ಬಿಡದೆ, ಸಂಪೂರ್ಣವಾಗಿ ಪ್ರತಿ ಬಿಂಬಿತವಾಗಿರುತ್ತದೆ. ವೇದವ್ಯಾಸರ ಜೀವಿತದ ಕಾರ್ಯವೇ ಜ್ಞಾನ ಕಾರ್ಯವು, ಶ್ರೀಕೃಷ್ಣನ ಜೀವಿತದ ಮುಖ್ಯ ಕಾರ್ಯವು ಬಲಕಾರ್ಯವು, ಜ್ಞಾನಕಾರ್ಯವಲ್ಲ; ಆದಕಾರಣವೂ ಗೀತೆಗೆ ವೇದವ್ಯಾಸರು ಅದನ್ನು ರಚಿಸಿದ್ದರಿಂದಲೇ ಪ್ರಾಮಾಣ್ಯವು ಬರುತ್ತದೆ. ಶ್ರೀಕೃಷ್ಣನು ಉಪದೇಶಿಸಿದ್ದನ್ನೇ ವೇದವ್ಯಾಸರು ಹೇಳಿರುವರೆಂದು ಏಕೆ ತಿಳಿಯಬೇಕು ಎಂದು ಕೇಳಿದರೆ, ವೇದವ್ಯಾಸರೂ ಶ್ರೀಕೃಷ್ಣನಂತೆ ನಾರಾಯಣನ ಅವತಾರರೇ ಎಂದು ಪ್ರತೀತಿಯುಂಟು. ಶ್ರೀಮನ್ನಾರಾಯಣನು ಸ್ವತಃ ಮೂಲ ರೂಪದಿಂದ ಪಂಚರಾತ್ರವನ್ನೂ ಆದಿಭಾಗವತವನ್ನೂ ಹಯಗ್ರೀವಾವತಾರವನ್ನು ಮಾಡಿ ಮೂಲ ರಾಮಾಯಣವನ್ನೂ ವ್ಯಾಸಾವತಾರವನ್ನು ತಾಳಿ ಭಾರತವನ್ನು ಬರೆದನೆಂದು ನಾರಾಯಣಾಷ್ಟಾಕ್ಷರ ಕಲ್ಪವೆಂಬ ಗ್ರಂಥದಲ್ಲಿ ಹೇಳಿದೆ. ಶ್ರೀಕೃಷ್ಣನೂ ಅವತಾರನಲ್ಲ ಸಾಮಾನ್ಯ ಮನುಷ್ಯನು, ವೇದವ್ಯಾಸರೂ ಸಾಮಾನ್ಯ ಮನುಷ್ಯರು ಎಂದೆನ್ನುವವರು ಗೀತೆಯು ಪ್ರಮಾಣ ಗ್ರಂಥವೆಂದು ಒಪ್ಪಲಾರರೆಂಬುದು ಸಹಜವಿದೆ. ಅಂಥವರು ಗೀತೆಯ ಸಿದ್ಧಾಂತಗಳನ್ನು ತಮಗೆ ಇಷ್ಟತೋರಿದ ಮತ್ತಾವ ಒರೆಗಲ್ಲಿಗೂ ಹಚ್ಚಿ ನೋಡಬಹುದು. ಯಾವ ಒರೆಗಲ್ಲಿಗೆ ಹಚ್ಚಿದರೂ ಅದು ಒರೆಗೆ ಸಂಪೂರ್ಣವಾಗಿ ಇಳಿಯುವುದು ಖಂಡಿತ.

ಮಹಾಭಾರತದಲ್ಲಿಯ ಮುಖ್ಯಭಾಗಗಳು ಎರಡು (೧) ಗೀತೆ (೨) ವಿಷ್ಣುಸಹಸ್ರನಾಮ. ಗೀತೆಯಲ್ಲಿ ಸರ್ವ ಭಾರತಾರ್ಥದ ಸಂಗ್ರಹವಿದೆ. ಸರ್ವಶಾಸ್ತ್ರಗಳಲ್ಲಿ ಭಾರತವು ಹೆಚ್ಚಿನದು, ಅದರಲ್ಲಿಯೂ ಗೀತೆ ಮತ್ತು ವಿಷ್ಣುಸಹಸ್ರನಾಮ ಇವೆರಡೂ ಹೆಚ್ಚಿನವೆಂದು ಕೂರ್ಮ ಪುರಾಣದಲ್ಲಿ ಹೇಳಿದೆ. ಸಾರಾಂಶ, ಗೀತೆಗೆ ಆಪ್ತಮೂಲತ್ವದಿಂದ ಪ್ರಾಮಾಣ್ಯವಿದೆ. ಧರ್ಮ ಮತ್ತು ಜ್ಞಾನ ಅಂದರೆ ಪರ ಮತ್ತು ಅಪರ ತತ್ವಗಳ ಜ್ಞಾನ ಇವು ಅದರ ವಿಷಯಗಳು. ಮೋಕ್ಷವು ಮುಖ್ಯಪ್ರಯೋಜನವು. ಇದರಲ್ಲಿ ಮುಖ್ಯವಾಗಿ ಹೇಳಿದ್ದೇನೆಂದರೆ, ಜ್ಞಾನವೇ ಮೋಕ್ಷಕ್ಕೆ ಮುಖ್ಯ ಸಾಧನವು, ಧರ್ಮವು ಆ

ಜ್ಞಾನಕ್ಕೆ ಸಾಧನವು. ಜ್ಞಾನವಾಗುವ ಪೂರ್ವದಲ್ಲಿ ಮಾಡಿದ ಧರ್ಮವು ಅಂತಃಕರಣಶುದ್ಧಿ ದ್ವಾರಾ ಪರಮಾತ್ಮ ಜ್ಞಾನವನ್ನು ಹುಟ್ಟಿಸಿ, ಮೋಕ್ಷಕ್ಕೆ ಸಾಧನವಾಗುತ್ತದೆ. ಜ್ಞಾನಾನಂತರದಲ್ಲಿ ಮಾಡಿದ ಧರ್ಮವು ಮುಕ್ತಿಯಲ್ಲಿ ಆನಂದೋತ್ಕರ್ಷಕ್ಕೆ ಕಾರಣವಾಗುತ್ತದೆ. ಹೀಗೆ ಗೀತೆಯ ವಿಷಯಗಳಿಗೂ ಪ್ರಯೋಜನಕ್ಕೂ ಸಂಬಂಧವಿದೆ. ಜ್ಞಾನಾನಂತರದಲ್ಲಿ ಧರ್ಮಾನುಷ್ಠಾನವೇ ಇಲ್ಲವೆಂದು ಕೆಲವರ ಅಂಬೋಣ; ಮೋಕ್ಷಕ್ಕೆ ಜ್ಞಾನವು ಸಾಧನವಾಗಿರದೆ, ಜ್ಞಾನ ಮತ್ತು ಕರ್ಮ ಇವುಗಳ ಸಮುಚ್ಚಯವು ಕಾರಣವೆಂದು ಭಾಸ್ಕರ ಮುಂತಾದವರ ಮತ. ಆದರೆ ಇದು ಸರಿಯಲ್ಲ. ಇರಲಿ. ಜ್ಞಾನದಿಂದಲೇ ಮೋಕ್ಷವೆಂಬ ಈ ವಿಷಯದಲ್ಲಿ ಶ್ರೀಶಂಕರ, ರಾಮಾನುಜ, ಮಧ್ವ ಇವರಲ್ಲಿ ಮತಭೇದವಿಲ್ಲ. ಜ್ಞಾನ ಅಂದರೆ ಅರ್ಥಾತ್ ಅಪರೋಕ್ಷಜ್ಞಾನದಿಂದಲೇ ಮೋಕ್ಷವೆಂಬ ಮಾತು ಮೂವರಿಗೂ ಸಮ್ಮತವಿದೆ. ಮೋಕ್ಷಕ್ಕೆ ಜ್ಞಾನವೇ ಮುಖ್ಯ ಸಾಧನವೆಂದೇ ಅವರೆಲ್ಲರ ಸಿದ್ಧಾಂತ. ಗೀತೆಯಲ್ಲಿ ಹೇಳಿದ ಧರ್ಮವು ಮೋಕ್ಷಕ್ಕೆ ಅಂದರೆ ಪರಮಾತ್ಮನನ್ನು ಪಡೆಯುವುದಕ್ಕೆ ಸಾಕದೆ.

ಈ ಮೇರೆಗೆ ಮಹಾಭಾರತವು ಅತ್ಯಂತ ಮಹತ್ವವುಳ್ಳ ಗ್ರಂಥವೆಂಬುದನ್ನೂ ಅದರಲ್ಲಿಯೂ ಗೀತೆಗೆ ಹೆಚ್ಚಿನ ಸ್ಥಾನವಿದೆಯೆಂಬುದನ್ನೂ ನೆನಪಿನಲ್ಲಿಡಬೇಕು. ಗೀತೆಯು ಭಾರತ ಪಾರಿಜಾತ ಪರಿಮಳವು.

೩ನೆಯ ಪ್ರಕರಣ

# ಗೀತೆಯ ವಿವೇಚನಾಪದ್ಧತಿ

ಹೀಗೆ ನಾವು ಪ್ರಸ್ತಾವನಾರೂಪವಾಗಿ ಹೇಳತಕ್ಕದ್ದನ್ನು ಹೇಳಿದೆವು. ಇನ್ನು ಪ್ರತಿಯೊಂದು ಅಧ್ಯಾಯದಿಂದ ಹೊರಡುವ ಪರಿಮಳವನ್ನು ವಾಚಕರಿಗೆ ಅರ್ಪಿಸತಕ್ಕದ್ದು ಮತ್ತು ಶ್ರೀಕೃಷ್ಣನು ಕೊಟ್ಟಿರುವ ಉತ್ತರವನ್ನು ಆತನು ಹೇಳಿದ ಕ್ರಮದಲ್ಲಿಯೇ ಈ ಗ್ರಂಥದಲ್ಲಿ ವಿಸ್ತರಿಸತಕ್ಕದ್ದು. ಆದರೆ ಹಾಗೆ ಮಾಡಲುಪಕ್ರಮಿಸುವ ಮುಂಚೆ, ಗೀತೆಯ ಅಧ್ಯಾಯಗಳಲ್ಲಿ ಬಂದಿರುವ ವಿವೇಚನಾಪದ್ಧತಿಯ ಮರ್ಮವನ್ನು ತುಸು ತಿಳಿಸಿ ಹೇಳುವೆವು. ಅಂದರೆ, ವಾಚಕರಿಗೆ ಗೀತೆಯನ್ನು ಓದುವುದಕ್ಕೆ ಅನುಕೂಲವಾಗುವುದು. ಇಲ್ಲದಿದ್ದರೆ, ಗೀತೆಯು ಅನೇಕರಿಗೆ ನೀರಸವಾಗಿಯೂ ಅನೇಕ ಪುನರುಕ್ತಿಗಳುಳ್ಳದ್ದಾಗಿಯೂ ವಿರೋಧಾಭಾಸಗಳುಳ್ಳದ್ದಾಗಿಯೂ ತೋರುವುದು. ಈ ವಿವೇಚನಾಪದ್ಧತಿಯನ್ನು ಓದಿದರೆ, ನಾವು ಮುಂದೆ ಕೊಡುವ ಸಾರವು ತಟ್ಟನೆ ಮನಸ್ಸಿಗೆ ತಟ್ಟುವುದು.

ಗೀತೆಯ ಅಧ್ಯಾಯಗಳ ಸಾಮಾನ್ಯ ಕ್ರಮವು ಹೀಗೆ ಇದೆ. ಒಟ್ಟಿಗೆ ಇರುವ ೧೮ ಅಧ್ಯಾಯಗಳಲ್ಲಿ, ಮೊದಲಿನ ಆರು ಅಧ್ಯಾಯಗಳದೊಂದು ಎರಡನೆಯ ಆರು ಅಧ್ಯಾಯಗಳದೊಂದು ಮತ್ತು ಕೊನೆಯ ಆರು ಅಧ್ಯಾಯಗಳದೊಂದು ಹೀಗೆ ಮೂರು ಗುಂಪುಗಳನ್ನು ಮಾಡಬಹುದು. ಮೊದಲಿನ ಆರು ಅಧ್ಯಾಯಗಳಲ್ಲಿ ಜ್ಞಾನಸಾಧನವು ಪ್ರಾಧಾನ್ಯವಿಷಯವಾಗಿದೆಯೆಂದೂ ಎರಡನೆಯ ಆರು ಅಧ್ಯಾಯಗಳಲ್ಲಿ ಸಾಧ್ಯವು ಅಂದರೆ ಪರಮಾತ್ಮನ ಜ್ಞಾನವು ಪ್ರಮುಖವಾದ ವಿಷಯವಾಗಿದೆಯೆಂದೂ ಕೊನೆಯ ಆರು ಅಧ್ಯಾಯಗಳಲ್ಲಿ ಇವೆರಡೂ ಎಂದರೆ ಸಾಧನ ಸಾಧ್ಯ ಇವೆರಡೂ ವಿಷಯಗಳ ಪ್ರಪಂಚನವು ಅಂದರೆ ವಿಸ್ತಾರವು ಬಂದಿರುವುದೆಂದೂ ಸ್ಥೂಲಮಾನದಿಂದ ಹೇಳಬಹುದು. ಇದಾಯಿತು ಒಟ್ಟು ಅಧ್ಯಾಯಗಳ ಕ್ರಮ. ಇನ್ನು ಮೊದಲಿನ ಗುಂಪಿನಲ್ಲಿ ಪ್ರತಿಯೊಂದು ಅಧ್ಯಾಯದ ಕ್ರಮವನ್ನು ಕೊಡುವೆವು. ೧ನೆಯ ಅಧ್ಯಾಯವು ಪ್ರಸ್ತಾವನಾಧ್ಯಾಯವು. ಇದರಲ್ಲಿ, ಗೀತೋಪದೇಶಕ್ಕೆ ಅರ್ಜುನನ ವಿಷಾದವು ಹೇಗೆ ಕಾರಣವಾಯಿತೆಂಬುದು ಹೇಳಿದೆ. ೨ನೆಯ ಅಧ್ಯಾಯದಲ್ಲಿ, ಮುಂಚೆ ಮುಖ್ಯವಾದ ಕೆಲವು ವೇದಾಂತತತ್ವಗಳನ್ನು ಕೊಟ್ಟು ಅಂಥ ಜ್ಞಾನವುಳ್ಳವನಾಗಿ ಯುದ್ಧ ಮಾಡಿದರೆ ಪಾಪವಿಲ್ಲವೆಂದು ಹೇಳಿ, ಆ ಬಳಿಕ, ಅಂಥ ಜ್ಞಾನವನ್ನು ಸಂಪಾದಿಸುವುದಕ್ಕೆ ಬೇಕಾಗುವ ಯೋಗವು ಅಂದರೆ ಉಪಾಯವು ಯಾವುದು ಎಂಬುದು ಹೇಳಿದೆ. ಕೊನೆಯಲ್ಲಿ

ಅಂಥ ಜ್ಞಾನವುಳ್ಳವನ ಲಕ್ಷಣಗಳನ್ನು ಕೊಟ್ಟಿದೆ. ೨ನೆಯ ಅಧ್ಯಾಯದಲ್ಲಿ ಹೇಳಿದ ಮುಖ್ಯ ಉಪಾಯವು ಯಾವುದೆಂದರೆ ಫಲಕಾಮನೆಯನ್ನು ಬಿಟ್ಟು ಕೊಟ್ಟು ಈಶ್ವರಾರ್ಪಣಬುದ್ಧಿಯಿಂದ ಕರ್ಮಮಾಡುವುದು. ಇದೇ ಕರ್ಮ ಯೋಗವು, ೩ನೆಯ ಅಧ್ಯಾಯದಲ್ಲಿ ಈ ಕರ್ಮಯೋಗದ ವಿಸ್ತಾರವು ಬಂದಿದೆ. ಇದರಲ್ಲಿ ಕರ್ಮಗಳನ್ನು ಏಕೆ ಮಾಡಲೇಬೇಕು, ಅವುಗಳನ್ನು ಹೇಗೆ ಮಾಡಿದರೆ ಪಾಪಲೇಪವಿಲ್ಲ ಎಂಬುದನ್ನು ಹೇಳಿ ಕೊನೆಯಲ್ಲಿ, ಕರ್ಮಯೋಗಕ್ಕೆ ಅವಶ್ಯವಾಗಿರುವ ಇಂದ್ರಿಯಜಯವನ್ನು ಹೇಗೆ ಸಂಪಾದಿಸಬೇಕೆಂಬುದು ಹೇಳಲ್ಪಟ್ಟಿರುವುದು. ೪ನೆಯ ಅಧ್ಯಾಯದಲ್ಲಿ ಮುಂಚೆ ಒಂದು ಅವಾಂತರ ವಿಷಯವು ಬಂದಿದೆ. ಅದಾವುದೆಂದರೆ ಪರಮಾತ್ಮನ ಅವತಾರಗಳ ಮೀಮಾಂಸೆ. ಅನಂತರ, ಕರ್ಮಗಳು ಯಾವವು, ಅವುಗಳೊಳಗಿನ ಭೇದಗಳು ಯಾವವು, ಕರ್ಮದ ಸಾಮಾನ್ಯ ಸ್ವರೂಪವೇನು, ಮಿಕ್ಕ ಕರ್ಮಗಳಿಗೂ ನಿವೃತ್ತ ಕರ್ಮಗಳಿಗೂ ಇರುವ ಭೇದವೇನು, ನಿವೃತ್ತಕರ್ಮದಲ್ಲಿಯ ಒಳಭೇದಗಳು ಯಾವುವೆಂಬೀ ವಿಷಯಗಳು ನಡುವೆ ಹೇಳಲ್ಪಟ್ಟು ಕೊನೆಗೆ ಜ್ಞಾನದ ಮಾಹಾತ್ಮವು ಬಂದಿದೆ. ೫ನೆಯ ಅಧ್ಯಾಯದಲ್ಲಿ, ಕರ್ಮಯೋಗದ ಮುಖ್ಯ ಎರಡು ಅಂಗಗಳಾದ ಸಂನ್ಯಾಸ ಅಥವಾ ವೈರಾಗ್ಯ ಮತ್ತು ಯೋಗ ಅಥವಾ ಈಶ್ವರಾರ್ಪಣಬುದ್ಧಿ ಇವುಗಳ ವ್ಯಾಖ್ಯೆ, ತುಲನೆ ಮುಂತಾದವುಗಳು ಬಂದಿವೆ. ನಡುವೆ, ಜ್ಞಾನಿಯ ಲಕ್ಷಣಗಳು ಪುನಃ ಕೊಡಲ್ಪಟ್ಟಿದ್ದು ಕೊನೆಗೆ ಧ್ಯಾನದ ಪ್ರಕಾರವೂ ಧ್ಯಾನಮಾಡತಕ್ಕ ವಸ್ತುವಿನ ಸ್ವರೂಪವೂ ಹೇಳಲ್ಪಟ್ಟಿವೆ. ೬ನೆಯ ಅಧ್ಯಾಯದಲ್ಲಿ, ಧ್ಯಾನಯೋಗದ ಸ್ವರೂಪ, ರೀತಿ, ಧ್ಯಾನಯೋಗವನ್ನು ಸಂಪೂರ್ತಿಗೊಳಿಸಿದವನ ಸ್ವರೂಪ, ಧ್ಯಾನದ ಫಲ, ಉದ್ದೇಶ, ಧ್ಯಾನಭ್ರಷ್ಟನಾದವನ ಸ್ಥಿತಿ, ಮತ್ತು ಧ್ಯಾನಿಗಳಲ್ಲಿ ತಾರತಮ್ಯ ಮುಂತಾದ ವಿಷಯಗಳು ಬಂದಿವೆ.

ಇದರ ಮೇಲಿಂದ ಗೊತ್ತಾಗುವುದೇನೆಂದರೆ, ಮೊದಲಿನ ಆರು ಅಧ್ಯಾಯಗಳಲ್ಲಿ (೧) ಕರ್ಮಯೋಗ (೨) ಮತ್ತು ಧ್ಯಾನಯೋಗ ಎಂಬಿವು ಮುಖ್ಯ ವಿಷಯಗಳು. ಇವೆರಡೂ ಪರಮಾತ್ಮನ ಜ್ಞಾನಕ್ಕೆ ಮುಖ್ಯ ಸಾಧನಗಳು.

ಇನ್ನು, ಎರಡನೆಯ ಗುಂಪಿನ ಕ್ರಮವನ್ನು ನೋಡುವ. ಈ ಎರಡನೆಯ ಗುಂಪಿನ ಮುಖ್ಯ ಉದ್ದೇಶವು ಪರಮಾತ್ಮನ ಮಾಹಾತ್ಮವನ್ನು ಹೇಳಿ ಆತನಲ್ಲಿ ಭಕ್ತಿಯನ್ನು ಹುಟ್ಟಿಸತಕ್ಕದ್ದು ಮತ್ತು ಆ ಭಕ್ತಿಯ ಹೆಚ್ಚಳಿಕೆಯನ್ನು ತೋರಿಸತಕ್ಕದ್ದು. ಹೀಗೆ ಪರಮಾತ್ಮನ ಮಾಹಾತ್ಮ ಜ್ಞಾನವೊಂದೇ ಈ ಗುಂಪಿನ ಮುಖ್ಯ ವಿಷಯವಿರುವುದರಿಂದ, ಮೊದಲಿನ ಗುಂಪಿನ ಅಧ್ಯಾಯಗಳಲ್ಲಿ ಬೇರೆ ಬೇರೆ ವಿಷಯಗಳು ಅಂದರೆ ಸನ್ಯಾಸ, ಯೋಗ, ಇವೇ ಮುಂತಾದ ಅನೇಕ ವಿಷಯಗಳು ಕೊಡಲ್ಪಟ್ಟು, ಅಧ್ಯಾಯಭೇದವನ್ನು ತೋರಿಸಿಕೊಡಲಿಕ್ಕೆ ಬರುವಂತೆ ಈ ಗುಂಪಿನಲ್ಲಿ ಮಾಡುವುದು ಶಕ್ಯವಿಲ್ಲ. ಆದರೂ ಒಂದೊಂದು ಅಧ್ಯಾಯದಲ್ಲಿ ಒಂದೊಂದು ಹೊಸ ರೀತಿಯನ್ನು ಕೊಟ್ಟು ಅದರಿಂದ

ಮುಖ್ಯ ವಿಷಯವಾದ ಪರಮಾತ್ಮನ ಮಾಹಾತ್ಮ ಜ್ಞಾನವು ಹೇಗೆ ಉಂಟಾಗುತ್ತದೆಂಬುದನ್ನು ಹೇಳುವುದು ಮಾತ್ರ ಶಕ್ಯವಿದೆ. ಉದಾ: ೭ನೆಯ ಅಧ್ಯಾಯದಲ್ಲಿ ಪರಮಾತ್ಮನ ಸೃಷ್ಟಿಯ ವಿಷಯಕ್ಕೆ ತಿಳಿಯತಕ್ಕ ವಿಷಯಗಳು ಯಾವವು ಎಂಬುದು ಹೇಳಲ್ಪಟ್ಟಿದೆ. ಇದರಲ್ಲಿ ಪರಮಾತ್ಮನ ಜ್ಞಾನ ಮತ್ತು ವಿಜ್ಞಾನ ಅಂದರೆ ವಿಶೇಷ ಜ್ಞಾನ ಇವು ಬಂದಿವೆ. ಜ್ಞಾನದಲ್ಲಿ ಪರಮಾತ್ಮನು ಜಗತ್ತನ್ನು ಹೇಗೆ ಹುಟ್ಟಿಸಿರುತ್ತಾನೆಂಬುದು ಹೇಳಿದೆ, ವಿಜ್ಞಾನದಲ್ಲಿ ಆತನು ಪ್ರತಿಯೊಂದು ಪದಾರ್ಥಕ್ಕೂ ಪದಾರ್ಥದೊಳಗಿನ ಧರ್ಮಗಳಿಗೂ ಕೂಡ ಹೇಗೆ ಪ್ರೇರಕನಾಗಿರುತ್ತಾನೆಂಬುದು, ಅಂದರೆ ಆತನ ಅಲೌಕಿಕ ಮಹಿಮೆಯು ವರ್ಣಿತವಾಗಿದೆ. ಆ ಬಳಿಕ, ಆತನ ಮಾಯಾಪ್ರಭಾವವು ವರ್ಣಿಸಲ್ಪಟ್ಟು ಆ ಮಾಯೆಯಿಂದ ಮುಸುಕಿದ ಅಜ್ಞಾನಿಗಳ ಸ್ಥಿತಿಯನ್ನು ವರ್ಣಿಸಿ ಕೊನೆಗೆ ಆ ಮಾಯೆಯನ್ನು ದಾಟುವುದಕ್ಕೆ ಮುಖ್ಯ ಉಪಾಯವು ಯಾವುದೆಂಬುದು ಹೇಳಲ್ಪಟ್ಟಿದೆ. ಆ ಉಪಾಯವು ಯಾವುದೆಂದರೆ ಅಧಿಭೂತನೂ ಅಧಿದೈವನೂ ಅಧ್ಯಾತ್ಮನೂ ಅಧಿಯಜ್ಞನೂ ಆದ ಪರಬ್ರಹ್ಮನಿಗೆ ಶರಣುಹೋಗುವುದು. ೮ನೆಯ ಅಧ್ಯಾಯದಲ್ಲಿ ೭ನೆಯ ಅಧ್ಯಾಯದ ಕೊನೆಗೆ ವಿವರಿಸಲ್ಪಟ್ಟ ಪದಾರ್ಥಗಳ ವ್ಯಾಖ್ಯೆಯು ಮುಂಚೆ ಕೊಡಲ್ಪಟ್ಟಿದ್ದು, ಅಂತ್ಯಕಾಲದಲ್ಲಿ ಆತನ ಸ್ಮರಣೆಯನ್ನು ಮಾಡುವ ರೀತಿ ಉಪಾಯಗಳನ್ನು ಕೊಟ್ಟು ಕೊನೆಗೆ ಪುನಃ ಸೃಷ್ಟಿ ಸಂಹಾರಾದಿ ಕರ್ತೃತ್ವದ ವರ್ಣನೆಯ ಬ್ರಹ್ಮ ಪ್ರಾಪ್ತಿಯ ಅರ್ಚಿರಾದಿ ಮಾರ್ಗದ ವಿವೇಚನೆಯೂ ಬಂದಿವೆ. ಅಂದರೆ, ಈ ರೀತಿಯಿಂದ ಪರಮಾತ್ಮನ ಮಾಹಾತ್ಮದ ಪುಷ್ಟೀಕರಣವಾಗಿದೆ. ೯ನೆಯ ಅಧ್ಯಾಯದಲ್ಲಿ ಪರಮಾತ್ಮನ ಬಗ್ಗೆ ತಿಳಿಯಬೇಕಾದ ಮುಖ್ಯ ಸಿದ್ಧಾಂತಗಳು ಬಂದಿವೆ. ಮುಂಚೆ ೭ನೆಯ ಅಧ್ಯಾಯದಲ್ಲಿ ಹೇಳಿದ ಜ್ಞಾನವಿಜ್ಞಾನಗಳನ್ನು ಪುನಃ ಹೆಚ್ಚಿಗೆ ವಿಸ್ತರಿಸಿ. ಈ ಮಾಹಾತ್ಮ್ಯ ಜ್ಞಾನದಿಂದ ಮನುಷ್ಯನ ಮನಸ್ಸಿನ ಮೇಲೆ ಉಂಟಾಗತಕ್ಕ ಮುಖ್ಯ ಪರಿಣಾಮವೆಂದರೆ ಪರಮಾತ್ಮನಲ್ಲಿ ಅನನ್ಯವಾದ ಭಕ್ತಿಯು ಹುಟ್ಟುವುದೇ ಎಂದು ಹೇಳಲ್ಪಟ್ಟು, ಪರಮಾತ್ಮನ ಭಕ್ತಿಗೂ ಅನ್ಯದೇವತೆಗಳ ಭಕ್ತಿಗೂ ಇರುವ ತಾರತಮ್ಯವು ವಿವೇಚಿಸಲ್ಪಟ್ಟಿದೆ. ಅಂದರೆ ಈ ಅಧ್ಯಾಯದಲ್ಲಿ ಗೀತೆಯ ಮುಖ್ಯ ಗುಟ್ಟಾದ ಪರಮಾತ್ಮನ ಭಕ್ತಿಯ ಮಾಹಾತ್ಮ್ಯವು ಬಂದಿದೆ. ಈ ರೀತಿಯಿಂದ ಪರಮಾತ್ಮನ ಮಾಹಾತ್ಮ್ಯದ ಹೆಚ್ಚಳವು ತೋರಿಸಲ್ಪಟ್ಟಿದೆ. ೧೦ನೆಯ ಅಧ್ಯಾಯದಲ್ಲಿ ಮುಂಚೆ, ಪರಮಾತ್ಮನ ವಿಶೇಷ ಶಕ್ತಿಯ ವರ್ಣನೆಯೂ ಆತನ ಸರ್ವಕರ್ತೃತ್ವಮಹಿಮೆಯೂ ಬಂದಿದ್ದು ಆತನ ಅನಂತವಿಭೂತಿಗಳ ವಿಸ್ತಾರವು ಬಂದಿದೆ. ಇದರಿಂದಲೂ ಪರಮಾತ್ಮನ ಮಾಹಾತ್ಮ್ಯಜ್ಞಾನವಾಗುತ್ತದೆ. ೧೧ನೆಯ ಅಧ್ಯಾಯದಲ್ಲಿ ವಿಶ್ವರೂಪದರ್ಶನವು ಮಾಡಿಸಲ್ಪಟ್ಟಿದೆ. ಇದೂ ಆತನ ಮಾಹಾತ್ಮ್ಯವನ್ನು ತೋರಿಸುವುದಕ್ಕೋಸ್ಕರವೇ ಇರುತ್ತದೆ. ಈ ರೀತಿಯಾಗಿ ಮೊದಲಿನ ಐದು ಅಧ್ಯಾಯಗಳಲ್ಲಿ ವಿವಿಧರೀತಿಯಿಂದ ಪರಮಾತ್ಮನ ಮಾಹಾತ್ಮ್ಯಜ್ಞಾನವನ್ನು

ಮಾಡಿಕೊಟ್ಟು ೧೨ನೆಯ ಅಧ್ಯಾಯದಲ್ಲಿ ಆ ಮಾಹಾತ್ಮ್ಯಜ್ಞಾನವುಂಟಾಗುವುದಕ್ಕೆ ಬೇಕಾಗುವ ಅನೇಕ ಸಾಧನಗಳಲ್ಲಿ ಪರಮಾತ್ಮನ ಭಕ್ತಿಯೇ ಎಲ್ಲಕ್ಕಿಂತಲೂ ಹೆಚ್ಚಿನ ಸಾಧನವೆಂಬುದನ್ನು ನಿಷ್ಕರ್ಷಿಸಿರುತ್ತದೆ. ಇದಾಯಿತು ೨ನೆಯ ಗುಂಪಿನ ಸಾರ.

ಇನ್ನು ಕೊನೆಯ ಆರು ಅಧ್ಯಾಯಗಳ ವಿಷಯಗಳ ಸಂಗತಿಯನ್ನು ಹೀಗೆಂದು ಹಚ್ಚಬಹುದು. ೧೩ನೆಯ ಅಧ್ಯಾಯದಲ್ಲಿಯೂ ಮುಂದಿನ ಅಧ್ಯಾಯಗಳಲ್ಲಿಯೂ ಮುಖ್ಯವಾಗಿ ಹಿಂದೆ ಹೇಳಿದ ಸಾಧನಗಳ ಪ್ರಪಂಚನವು ಬಂದಿರುವುದು. ಮುಂಚೆ, ಈ ಅಧ್ಯಾಯದಲ್ಲಿ ಹಿಂದಿನ ಯಾವತ್ತೂ ಅಧ್ಯಾಯಗಳಲ್ಲಿ ಹೇಳಿದ ವಿಷಯಗಳೆಲ್ಲವೂ ಕ್ರೋಡೀಕರಿಸಿ ಹೇಳಲ್ಪಟ್ಟಿವೆ. ಅಂದರೆ ೧೩ನೆಯ ಅಧ್ಯಾಯವು ಹಿಂದಿನ ಅಧ್ಯಾಯಗಳ ಸಾರವೆಂದು ಹೇಳಬಹುದು. ಹಿಂದಿನ ಅಧ್ಯಾಯಗಳಲ್ಲಿ ಹೇಳಲ್ಪಟ್ಟ ಮುಖ್ಯ ವಿಷಯಗಳು ಯಾವುವೆಂದರೆ (೧) ಮೊದಲಿನ ಆರು ಅಧ್ಯಾಯಗಳಲ್ಲಿ ಜ್ಞಾನಸಾಧನ (೨) ಎರಡನೆಯ ಆರು ಅಧ್ಯಾಯಗಳಲ್ಲಿ ಜ್ಞೇಯ ಅಂದರೆ ಪರಬ್ರಹ್ಮಸ್ವರೂಪ; ಇವಲ್ಲದೆ ಪರಬ್ರಹ್ಮನ ಸ್ವರೂಪವನ್ನು ಕುರಿತು ಹೇಳುವಾಗ ಜೀವನಸ್ವರೂಪ, ಕ್ಷೇತ್ರಸ್ವರೂಪ ಇವೂ ಕೆಲವು ಕಡೆಗೆ ಬಂದಿವೆ. ಹೀಗೆ ಅಲ್ಲಲ್ಲಿ ಬಿಡಿಬಿಡಿಯಾಗಿ ಹೇಳಿದ ಈ ವಿಷಯಗಳೆಲ್ಲವೂ ಇಲ್ಲಿ ಸಂಕ್ಷೇಪವಾಗಿ ಪಿಂಡೀಕರಣಮಾಡಿ ಹೇಳಲ್ಪಟ್ಟಿವೆ. ಪಿಂಡೀಕರಣ ಮಾಡಲ್ಪಟ್ಟ ಮಾತ್ರಕ್ಕೆ, ಅವೆಲ್ಲವೂ ಒಂದರಲ್ಲಿ ಒಂದು ಮಿಶ್ರವಾಗಿ ಹೋಗಿರುವವೆಂದು ಮಾತ್ರ ತಿಳಿಯಬಾರದು. ಆ ವಿಷಯಗಳನ್ನು ಸ್ಪಷ್ಟವಾಗಿಯೂ ಬಿಡಿಬಿಡಿಯಾಗಿಯೂ ಹೇಳಿದೆ. ಈ ಅಧ್ಯಾಯದೊಳಗಿನ ವಿಷಯಗಳ ಕ್ರಮವು ಹೀಗೆ ಇದೆ. (೧) ಕ್ಷೇತ್ರ-ಕ್ಷೇತ್ರಜ್ಞ ಸ್ವರೂಪ (೨) ಜ್ಞಾನಸಾಧನ (೩) ಜ್ಞೇಯನಾದ ಪರಬ್ರಹ್ಮನ ಸ್ವರೂಪ (೪) ಪ್ರಕೃತಿ-ಪುರುಷರ ಸ್ವರೂಪ ಮತ್ತು ಸಂಬಂಧ (೫) ಬ್ರಹ್ಮದರ್ಶನ ಸಾಧನ (೬) ಪುನಃ ಪ್ರಕೃತಿ-ಪುರುಷಸ್ವರೂಪ. ಗೀತೆಯ ೧೮ ಅಧ್ಯಾಯಗಳಲ್ಲಿ ಇದು ಬಹಳ ಮಹತ್ವದ ಮತ್ತು ಕಠಿನವಾದ ಅಧ್ಯಾಯವು. ೧೪ರಿಂದ ೧೮ರವರೆಗಿನ ಅಧ್ಯಾಯಗಳಲ್ಲಿಯ ಮುಖ್ಯ ವಿಷಯವು ಸಾಧನಗಳ ಪ್ರಪಂಚನವು. ಮೊದಲಿನ ಆರು ಅಧ್ಯಾಯಗಳಲ್ಲಿ ಕಾಮಾದಿಗಳ ವರ್ಜನವನ್ನು ಮಾಡಿ ಕರ್ಮಯೋಗ ಧ್ಯಾನಯೋಗಗಳನ್ನು ಮಾಡಬೇಕೆಂಬುದಾಗಿ ಜ್ಞಾನಸಾಧನಗಳು ಹೇಳಲ್ಪಟ್ಟಿವೆ. ಆ ಕಾಮಾದಿ ವರ್ಜನವೆಂದರೇನು, ಅದನ್ನು ಮಾಡುವ ಬಗೆ ಹೇಗೆ ಎಂಬಿವೇ ಮುಂತಾದ ವಿಷಯಗಳು ಈ ೫ ಅಧ್ಯಾಯಗಳಲ್ಲಿ ವಿಶೇಷ ರೀತಿಯಿಂದ ಚರ್ಚಿಸಲ್ಪಟ್ಟಿವೆ. ಮುಂಚೆ ಈ ೧೪ನೆಯ ಅಧ್ಯಾಯದಲ್ಲಿ ಸಂಸಾರಬಂಧವೆಂದರೇನೆಂಬುದು ವಿಸ್ತರಿಸಲ್ಪಟ್ಟಿದೆ. ಏಕೆಂದರೆ ಬಂಧದ ಸ್ವರೂಪವನ್ನು ತಿಳಿದರೆ ಅದರಿಂದ ಬಿಡುಗಡೆಹೊಂದ ಬೇಕೆಂಬ ಬುದ್ಧಿಯಾಗುವುದು. ಸತ್ವರಜಸ್ತಮಗಳೇ ಬಂಧನಕ್ಕೆ ಕಾರಣಗಳೆಂದು ಹೇಳಿ ಗುಣತ್ರಯಗಳಿಂದ ಬಂಧನ ಪ್ರಕಾರವು ಹೇಳಿಲ್ಪಟ್ಟಿದೆ. ಮತ್ತು

ಕಾಮಾದಿಗಳನ್ನು ವರ್ಜನಮಾಡುವವನು ಈ ಗುಣಗಳನ್ನು ಮೀರಬೇಕಾಗುತ್ತದೆಂದು ಹೇಳಿ ಅಂಥ ಗುಣಾತೀತನ ಲಕ್ಷಣಗಳು ಹೇಳಲ್ಪಟ್ಟು ಕೊನೆಗೆ ಗುಣತ್ರಯಬಂಧನದ ಪರಿಹಾರಕ್ಕೆ ಉಪಾಯವು ಹೇಳಿದೆ. ೧೪ನೆಯ ಅಧ್ಯಾಯದಲ್ಲಿ ಸಂಸಾರಬಂಧನದ ಏಕದೇಶ ಸ್ವರೂಪವು ಅಂದರೆ ಒಂದು ಅಂಗವು ಮಾತ್ರವೇ ಬಂದಿದೆ. ೧೫ನೆಯ ಅಧ್ಯಾಯದಲ್ಲಿಯಾದರೋ, ಸಮಗ್ರ ಸಂಸಾರಕ್ಕೆ ಕಾರಣವಾದ ಪ್ರಕೃತಿ ಮುಂತಾದವುಗಳೆಲ್ಲವುಗಳ ಜಗತ್ಸ್ವರೂಪವನ್ನು ತೋರಿಸಿ, ಅದನ್ನು ದಾಟುವ ಇಚ್ಛೆಯನ್ನು ಹುಟ್ಟಿಸಿ ಸಾಧನಗಳನ್ನು ತಿಳಿದು ಕೊಳ್ಳಲು ಕುತೂಹಲವುಳ್ಳವರಿಗೋಸ್ಕರ ಹಿಂದೆ ಹೇಳಿದ ಸಾಧನಗಳೇ ಇಲ್ಲಿ ಹೆಚ್ಚು ವಿಸ್ತಾರವಾಗಿ ವಿವರಿಸಲ್ಪಟ್ಟಿವೆ. ಹೀಗೆ ಸಾಧನಗಳ ಪ್ರಪಂಚನವನ್ನು ಮಾಡುವಾಗ ಭಗವಂತನ ಅಲೌಕಿಕ ಮಾಹಾತ್ಮವೂ ತೋರಿಸಲ್ಪಟ್ಟಿರುತ್ತದೆ. ಅಂದರೆ ಈ ಅಧ್ಯಾಯದಲ್ಲಿ, ಮನುಷ್ಯನ ಮುಖ್ಯ ಧ್ಯೇಯವೇನಿರಬೇಕು ಮತ್ತು ಜ್ಞಾನ ಮತ್ತು ಮೋಕ್ಷಗಳಿಗೆ ಸಾಧನಗಳಾವುವೆಂಬುದು ಸಂಕ್ಷೇಪವಾಗಿಯೂ ಸುಂದರವಾಗಿಯೂ ವರ್ಣಿಸಲ್ಪಟ್ಟಿದೆ. ೧೫ನೆಯ ಅಧ್ಯಾಯದಲ್ಲಿ ಸಂಕ್ಷೇಪವಾಗಿ ಹೇಳಲ್ಪಟ್ಟ ಜ್ಞಾನ ಮತ್ತು ಮೋಕ್ಷಗಳ ಸಾಧನಗಳೇ ೧೬ನೆಯ ಅಧ್ಯಾಯದಲ್ಲಿ ವಿಸ್ತಾರದಿಂದ ವಿವರಿಸಲ್ಪಟ್ಟಿವೆ. ಸಾಧನಗಳನ್ನು ಆಚರಣೆಯಲ್ಲಿ ತರುವವರಿಗೆ ಅನುಕೂಲವಾಗಿರುವ ಸಂಗತಿಗಳಿಗೆ ದೈವೀ ಸಂಪತ್ತೆಂದೂ ಪ್ರತಿಕೂಲವಾಗಿರುವ ಸಂಗತಿಗಳಿಗೆ ಆಸುರೀ ಸಂಪತ್ತೆಂದೂ ಹೆಸರಿಟ್ಟು ಅವು ವರ್ಣಿತವಾಗಿವೆ. ೧೭ನೆಯ ಅಧ್ಯಾಯದಲ್ಲಿ ಗುಣತ್ರಯಗಳು ಶ್ರದ್ಧೆಯಮೇಲೆ ಹೇಗೆ ವಿಭಾಗಿಸಲ್ಪಟ್ಟಿರುವುವೆಂಬುದನ್ನು ಹೇಳಿ, ಶ್ರದ್ಧೆಯಮೇಲಿಂದ ಆಯಾ ಜೀವನ ಮೂಲ ಸ್ವರೂಪವು ಸಾತ್ವಿಕವೋ ರಾಜಸವೋ ತಾಮಸವೋ ಎಂಬುದು ಹೇಗೆ ವ್ಯಕ್ತವಾಗುತ್ತದೆಂಬುದನ್ನು ಹೇಳಿದೆ. ಮತ್ತು ಆಹಾರ, ಯಜ್ಞ, ತಪ, ದಾನ ಇವುಗಳಲ್ಲಿ ಸಾತ್ವಿಕಾದಿ ಭೇದಗಳನ್ನು ಹೇಳಿದೆ. ಕೊನೆಯ ಅಧ್ಯಾಯದಲ್ಲಿ ಅಂದರೆ ೧೮ನೆಯ ಅಧ್ಯಾಯದಲ್ಲಿ ಸಾಧನಗಳ ಸಂಬಂಧವಾಗಿ ಬಂದ ಮುಖ್ಯ ತತ್ವಗಳೆಲ್ಲವೂ ಕ್ರೋಡೀಕರಿಸಲ್ಪಟ್ಟಿದ್ದು ೧೭ನೆಯ ಅಧ್ಯಾಯದಲ್ಲಿ ಹೇಳದೆ ಉಳಿದಿರುವ ಮಿಕ್ಕ ತ್ರೈಗುಣ್ಯಗಳೂ, ಅಂದರೆ ಜ್ಞಾನ, ಕರ್ಮ, ಕರ್ತ, ಬುದ್ಧಿ, ಧೈರ್ಯ ಮತ್ತು ಸುಖ ಇವುಗಳಲ್ಲಿಯ ತ್ರೈವಿಧ್ಯವು ಉಕ್ತವಾಗಿದೆ. ಅಲ್ಲದೆ ಚಾತುರ್ವರ್ಣ್ಯದ ಕರ್ಮವಿಭಾಗವೂ ಯೋಗದ ಕೊನೆಯ ಮೀಮಾಂಸೆಯೂ ಮಾಡಲ್ಪಟ್ಟಿದ್ದು ಗೀತೋಪದೇಶವು ಉಪಸಂಹರಿಸಲ್ಪಟ್ಟಿದೆ.

ಹೀಗೆ, ನಾವು ಯಾವತ್ತೂ ಅಧ್ಯಾಯಗಳ ವಿಷಯಗಳ ಕ್ರಮವನ್ನು ಕೊಟ್ಟಿರುವೆವು. ಇನ್ನು ಈ ಯಾವತ್ತು, ಅಧ್ಯಾಯಗಳಿಗೆ ಸಾಮಾನ್ಯವಾಗಿರುವ ವಿವೇಚನಾಪದ್ಧತಿಯು ಯಾವುದೆಂಬುದನ್ನು ತುಸು ಹೇಳುತ್ತೇವೆ. ಪ್ರತಿಯೊಂದು ಅಧ್ಯಾಯದಲ್ಲಿ ಸಾಮಾನ್ಯವಾಗಿ ನೀವು

ಹೀಗೆ ಕ್ರಮವನ್ನು ನೋಡಬಹುದು. (೧) ಪ್ರಸ್ತಾವನೆ. ಇದು ಕೆಲವು ಕಡೆಗೆ ಉಪೋದ್ಘಾತ ರೂಪವಾಗಿಯೂ, ಕೆಲವು ಕಡೆಗೆ ಪ್ರಶ್ನೆ ರೂಪವಾಗಿಯೂ ಕೆಲವು ಕಡೆಗೆ ಕೇವಲ ಸ್ತುತಿರೂಪವಾಗಿಯೂ ಇರುತ್ತದೆ. (೨) ಮುಖ್ಯ ವಿಷಯ (೩) ಮುಖ್ಯ ವಿಷಯದ ಉಪ ಸಂಹಾರ (೪) ಫಲಕಥನ (೫) ಅದರ ಸ್ತುತಿ (೬) ಅದರ ಧ್ಯೇಯ. ಇದರಿಂದ, ಗೀತೆಯಲ್ಲಿ, ಅನೇಕ ಕಡೆಗೆ, ಮುಖ್ಯ ವಿಷಯಕ್ಕೆ ಪ್ರತ್ಯಕ್ಷವಾಗಿ ಸಂಬಂಧಿಸದೆ ಇರುವ ಅನೇಕ ಸಂಗತಿಗಳು ಬಂದಿವೆ ಎಂಬುದು ಗೊತ್ತಾಗುವುದು. ನಾವು ನಮ್ಮ ಗೀತಾಸಂದೇಶವೆಂಬ ಗ್ರಂಥದಲ್ಲಿ ಹೇಳಿದಂತೆ, ಗೀತಾಜ್ಞಾನದ ಮಾಹಾತ್ಮ್ಯವನ್ನು ಹೇಳುವ ಶ್ಲೋಕಗಳು ಸುಮಾರು ೭೦-೭೫ ಇರುತ್ತವೆ. ಇದಲ್ಲದೆ, ಅಲ್ಲಲ್ಲಿ ಹಿಂದಿನ ವಿಷಯದ ಅನುವಾದ, ಅರ್ಥವಾದ, ಉಪಮೆ, ಸ್ತುತಿ ನಿಂದೆ ಇವೇ ಮುಂತಾದ ಅವಾಂತರ ವಿಷಯಗಳನ್ನೊಳಗೊಂಡ ಶ್ಲೋಕಗಳು ಸುಮಾರು ೧೦೦ ಇರುತ್ತವೆ. ಇವುಗಳ ಸಾರವನ್ನು ಈ ಗ್ರಂಥದಲ್ಲಿ ಕೊಡುವ ಕಾರಣವಿಲ್ಲ, ಕೊಟ್ಟಿಲ್ಲ. ಮೇಲಾಗಿ, ಪ್ರತಿಯೊಂದು ಅಧ್ಯಾಯದಲ್ಲಿ, ಬಹುಶಃ ಒಂದೆರಡೇ ಅತ್ಯಂತ ತೊಡಕಿನ ವಿಷಯಗಳಿರುತ್ತವೆ. ಅವುಗಳನ್ನು ಮಾತ್ರವೇ, ನಾವು ಈ ಗ್ರಂಥದಲ್ಲಿ ವಿಸ್ತಾರದಿಂದ ವಾಚಕರ ಮನದಲ್ಲಿ ಬಿಂಬಿಸುವಂತೆ ತಿಳಿಸಿ ಹೇಳಿರುವೆವು. ಮಿಕ್ಕ ಸುಲಭವಾಗಿದ್ದ ವಿಷಯಗಳ ಸಾರವನ್ನು ಮಾತ್ರವೇ ಕೊಟ್ಟಿರುವೆವು. ಮತ್ತೂ ಒಂದು ರೀತಿಯಿಂದ, ಈ ಗ್ರಂಥವು ಸಂಕ್ಷೇಪವಾಗಿ ಮಾಡಲ್ಪಟ್ಟಿದೆ. ಹೇಗೆಂದರೆ, ಅನೇಕ ಅಧ್ಯಾಯಗಳಿಗೆ ಮುಂಚೆ ಪ್ರಸ್ತಾವನಾರೂಪವಾದ ಕೆಲವು ಶ್ಲೋಕಗಳಿರುವವು. ಆ ಪ್ರಸ್ತಾವನೆಯಲ್ಲಿ ಅಧ್ಯಾಯದಲ್ಲಿ ಬಂದಿರುವ ವಿಷಯದ ಸ್ತುತಿ, ದೌರ್ಲಭ್ಯ ಇವೇ ಮುಂತಾದವುಗಳಿರುತ್ತವೆ. ಅವುಗಳನ್ನು ನಾವು ಈ ಗ್ರಂಥದಲ್ಲಿ ಕೊಡುವ ಕಾರಣವಿಲ್ಲ. ೨, ೩, ೪, ೫, ೬, ೭, ೯, ೧೦, ೧೧, ೧೨, ೧೩, ೧೪, ೧೭, ೧೮ ಈ ಅಧ್ಯಾಗಳಿಗೆ ಹೀಗೆ ಪ್ರಸ್ತಾವನಾರೂಪವಾದ ಶ್ಲೋಕಗಳಿರುತ್ತವೆ. ಅವುಗಳ ಸಂಖ್ಯೆ ಸುಮಾರು ೫೦ ಆಗಬಹುದು. ಹೀಗೆ ನಾವು ಅನೇಕ ರೀತಿಯಿಂದ ಶ್ಲೋಕಗಳನ್ನು ಕಡಿಮೆ ಮಾಡಿರುವೆವು.

ತಾತ್ಪರ್ಯಾರ್ಥವನ್ನು ಕೊಡುವಾಗ ಕೂಡ ನಾವು ಅನೇಕ ವಿಷಯಗಳನ್ನು ಕಡಿಮೆಮಾಡಿರುತ್ತೇವೆ. ಅನೇಕ ಕಡೆಗೆ ಅನೇಕ ವಿಷಯಗಳು ಪುನಃ ಪುನಃ ಬಂದಿವೆ. ಅವುಗಳ ಪುನರುಚ್ಚಾರಣೆ ಮಾಡುವುದರಲ್ಲಿ, ಆಗಿನ ಸಂದರ್ಭಾನುಸಾರವಾಗಿ ಗೀತೆಗೆ ವಿಶಿಷ್ಟ ಉದ್ದೇಶವಿದ್ದರೂ ಪರಿಮಳವನ್ನು ತಿಳಿದುಕೊಳ್ಳುವುದಕ್ಕೆ ನಾವು ಅವನ್ನು ಪುನಃ ಪುನಃ ಕೊಡುವ ಕಾರಣವಿಲ್ಲ. ಆದಕಾರಣ, ಅವನು ಒಮ್ಮೆ ಹೇಳಿ ಮುಂದೆ ಸಂಕ್ಷೇಪಿಸಿದ್ದೇವೆ. ಉದಾ: ಸುಖದುಃಖಸಮತ್ವ, ದ್ವಂದ್ವಮೋಹತ್ಯಾಗ, ಕಾಮಕ್ರೋಧಾದಿಗಳನ್ನು ಬಿಡುವುದು, ಫಲೇಚ್ಛೆಯನ್ನು ಬಿಡುವುದು, ಅನಾಸಕ್ತಿಯಿಂದ ಕಾರ್ಯಮಾಡುವುದು, ಇಂದ್ರಿಯ ಜಯ, ಮನೋ ಜಯ, ಪರಮಾತ್ಮನಲ್ಲಿ ಮನಸ್ಸಿಡಬೇಕೆಂಬ ವಿಷಯ, ಭಕ್ತಿಯನ್ನು ಮಾಡಬೇಕೆಂಬ ವಿಷಯ, ಜ್ಞಾನವನ್ನು

ಸಂಪಾದಿಸಬೇಕೆಂಬ ವಿಷಯ, ಸೃಷ್ಟಿ ಸ್ಥಿತಿಲಯಗಳ ವರ್ಣನೆ ಇವೇ ಮುಂತಾದ ವಿಷಯಗಳು ಮೇಲೆ ಮೇಲೆ ಬಂದಿರುವವು. ಹಾಗೆಯೇ, ಗೀತೆಯಲ್ಲಿ ಸಮಾನಾರ್ಥಕವಾದ ಶ್ಲೋಕಗಳೂ ಅನೇಕವಿರುವವು. ಅವನ್ನು ಇಲ್ಲಿ ಕೊಡುವ ಕಾರಣವಿಲ್ಲ.

ಈ ರೀತಿಯಾಗಿ, ನಾವು ಎಷ್ಟು ರೀತಿಯಿಂದ, ಈ ಗ್ರಂಥವನ್ನು ಸಂಕ್ಷೇಪವಾಗಿ ಮಾಡಿರುವವೆಂಬುದು ಗೊತ್ತಾಗುವುದು. ಈ ಗೀತಾ ಪರಿಮಳವೆಂದರೆ ಮಿಕ್ಕ ಶ್ಲೋಕಗಳ ತಾತ್ಪರ್ಯವೆಂಬುದನ್ನು ಲಕ್ಷದಲ್ಲಿಟ್ಟು, ವಾಚಕರು ಈ ಗ್ರಂಥವನ್ನು ಓದಬೇಕು.

೭ನೆಯ ಪ್ರಕರಣ

( ೨ನೆಯ ಅಧ್ಯಾಯದ ತಾತ್ಪರ್ಯ )

# ಆತ್ಮನ ಸ್ವರೂಪಜ್ಞಾನ-ಅದಕ್ಕೆ ಸಾಧನ ಮತ್ತು ಜ್ಞಾನಿಯ ಲಕ್ಷಣಗಳು

ಹೀಗೆ, ನಾವು ಗೀತೋಪದೇಶವನ್ನು ತಿಳಿದುಕೊಳ್ಳುವುದಕ್ಕೆ ಬೇಕಾಗುವ ಕೆಲವು ಸಾಮಾನ್ಯ ಮಾತುಗಳನ್ನು ಹಿಂದಿನ ಪ್ರಕರಣಗಳಲ್ಲಿ ಕೊಟ್ಟಿದ್ದಾಯಿತು. ಇನ್ನು, ಆ ಉಪದೇಶದ ಮರ್ಮವನ್ನು ಅದು ಗೀತೆಯಲ್ಲಿ ಯಾವ ಕ್ರಮದಲ್ಲಿ ಬಂದಿರುವುದೋ ಅದೇ ಕ್ರಮದಲ್ಲಿ-ಆದರೂ ನಮ್ಮ ಭಾಷೆಯಲ್ಲಿ ಮತ್ತು ಆಧುನಿಕ ರೀತಿಯಲ್ಲಿ- ಸಂಕ್ಷೇಪವಾಗಿ ಕೊಡುವೆವು.

ಗೀತೆಯ ೨ನೆಯ ಅಧ್ಯಾಯದ ಪ್ರಾರಂಭದಿಂದಲೇ ಶ್ರೀಕೃಷ್ಣನ ಉತ್ತರಕ್ಕೆ ಮೊದಲಾಗಿದೆ. ಅರ್ಜುನನ ವಿಚಾರಗಳು ಆರ್ಯರಿಗೆ ಸಲ್ಲ ತಕ್ಕವುಗಳು ಅಲ್ಲ, ಅವು ಸ್ವರ್ಗವನ್ನು ಕೂಡ ಕೊಡಲಾರವು, ಇಷ್ಟೇ ಅಲ್ಲ, ಆತನ ಕೀರ್ತಿಗೆ ಭಂಗವುಂಟುಮಾಡುವಂಥವು, ಎಂಬುದೇ ಶ್ರೀಕೃಷ್ಣನು ಕೊಟ್ಟ ಮೊದಲಿನ ಉತ್ತರ. ಆದಕಾರಣ ೧ನೆಯ ಅಧ್ಯಾಯವನ್ನು ಎರಡನೆಯ ಅಧ್ಯಾಯದಿಂದ ಅಲ್ಲಿಯೇ ವಿಂಗಡಿಸಿದ್ದು ವಿಹಿತವೇ ಸರಿ.

## ಕೊಲ್ಲಲಿಕ್ಕೆ ನೀನೆಷ್ಟರವನು?

'ಹೇಗೆ ಕೊಲ್ಲಲಿ' ಎಂದು ಕೇಳಿದುದಕ್ಕೆ 'ಕೊಲ್ಲಲಿಕ್ಕೆ ನೀನೆಷ್ಟರವನು' ಎಂಬುದೇ ಕೃಷ್ಣನು ಕೊಟ್ಟ ಉತ್ತರದ ತಾತ್ಪರ್ಯ. ನಿಜವಾಗಿ ಅವರು ಸಾಯುವವರಲ್ಲ, ನೀನು ಕೊಲ್ಲುವವನಲ್ಲ. 'ಅವರು' ಎಂದರೆ ಯಾರೆಂದು ತಿಳಿದಿರುವಿ? ಅವರ ದೇಹಗಳೊ ಅವರ ಜೀವಗಳೊ? ಈ ದೇಹಗಳು ಹೋದರೂ ಹೊಸ ದೇಹಗಳು ಬಂದೇ ಬರುವವು. ಭರತೇಶವೈಭವದಲ್ಲಿ ಹೇಳಿದಂತೆ

**'ಹೊತ್ತ ದೇಹವ ಬರುಮರಣದೊಳ್ಬಿಟ್ಟರೆ ಮತ್ತೊಂದು ದೇಹ ಮುಂದಹುದು'**

ಅಂದರೆ, ಮನುಷ್ಯನಿಗೆ ಪುನರ್ಜನ್ಮವಿರುವುದರಿಂದ ದೇಹನಾಶದ ಬಗ್ಗೆ ಶೋಕಿಸುವ ಕಾರಣವಿಲ್ಲ. ಈ ದೇಹವನ್ನು ಬಿಟ್ಟು ಮತ್ತೊಂದು ದೇಹವನ್ನು ಧರಿಸುವುದೆಂದರೆ

**'ಒಂದು ಬಿಟ್ಟೊಂದು ವಸ್ತ್ರವ ಹೊದೆವಂತಿಹುದು'**

-ಭರತೇಶವೈಭವ.

ಇನ್ನು ಅವರ ಜೀವಗಳು ಸಾಯುತ್ತವೆಂದು ದುಃಖಪಡಬೇಕು. ಅದೂ ಸರಿಯಲ್ಲ. ಏಕೆಂದರೆ, ಜೀವಗಳು ಹೇಳಿಕೇಳಿ ಅನಾದಿ ನಿತ್ಯಗಳು.

**'ಪಿಂದಿರ್ದೆನಿಂದಿರ್ಪೆಂ ಮುಂದುಮಿರ್ಪೆನೆನ್ನಿಂದನ್ಯವಿಲ್ಲಿಳೆಯೊಳು'**

-ಶಿವಗೀತೆ.

ಅದೇ ಮೇರೆಗೆ ಕೊಲ್ಲುವವನೂ ನೀನಲ್ಲ. ನೀನೆಂದರೆ ಯಾರೆಂದು ತಿಳಿದಿರುವಿ? ನೀನು ವಿಶ್ವಶಕ್ತಿಯ ಒಂದು ತುಣುಕು. ಪರಮಾತ್ಮನ ಕಪಟನಾಟಕದಲ್ಲಿಯ ಒಂದು ಪಾತ್ರನು ನೀನು. ಜಗದ್ಯಂತ್ರದ ಒಂದು ಕೀಲವು ನೀನು. ಆ ವಿಶ್ವಶಕ್ತಿಯು ಪ್ರೇರಿಸಿದಂತೆ ನಡೆಯುವುದು ನಿನ್ನ ಕೆಲಸ. ಕಪಟನಾಟಕ ಸೂತ್ರಧಾರನಾದ ಪರಮಾತ್ಮನು ಕುಣಿಸಿದಂತೆ ಕುಣಿಯುವುದು ನಿನ್ನ ಕೆಲಸ. ಆ ಯಂತ್ರವಾಹಕನು ತಿರುಗಿಸಿದಂತೆ ತಿರುಗುವುದು ನಿನ್ನ ಕೆಲಸ. ಒಟ್ಟಿಗೆ, ಕೊಲ್ಲುವವನು ನಾನಲ್ಲ ಸಾಯುವವರು ಅವರಲ್ಲವೆಂದು ತಿಳಿದುಬಿಟ್ಟರೆ ತೀರಿತು; ಶೋಕಕ್ಕೆ ಅವಕಾಶವೇ ಉಳಿಯುವುದಿಲ್ಲ. 'ಅವರು ನನ್ನವರು' ಎಂಬ ನಿನ್ನ ಭಾವನೆಯೇ ನಿನ್ನ ದುಃಖಕ್ಕೆ ಕಾರಣ. ಅದು ಶುದ್ಧ ಭ್ರಮ. ಅವರು ನಿನ್ನವರಲ್ಲ, ನನ್ನವರು; ನೀನೂ ನಿನ್ನವನಲ್ಲ, ನನ್ನವನು. ಆ ವಿಶ್ವಯಂತ್ರವನ್ನು ನಡಿಸುವ ಚಿಂತೆ ನಿನಗೇಕೆ? ಆ ವಿಶ್ವಶಕ್ತಿಯು ಎಂದಿಗೂ ನಾಶವಾಗದಂಥದು.

**"ಹುಟ್ಟು ಮೆಟ್ಟೆಂಬುದು ನಿಮ್ಮಲ್ಲಿಲ್ಲ, ನಿಮ್ಮಿಂದ ನೀವೇ**
**ಸ್ವಯಂಭವನಯ್ಯಾ, ಅಳಿಯ, ಬೆಳೆಯ, ಸುಳಿವನಲ್ಲ**
**ಪ್ರಳಯವಿಲ್ಲದ ವಿಜಯನು**

-ವಚನಶಾಸ್ತ್ರ

ಎಂಬಂತೆ ಆ ವಿಶ್ವಶಕ್ತಿಯನ್ನಾಗಲಿ, ಅದರ ಅಂಶ ಅಥವಾ ಪ್ರತಿಬಿಂಬನಾದ ಜೀವನನ್ನಾಗಲಿ ನಷ್ಟ ಮಾಡುವ ಶಕ್ತಿಯು ಯಾವನಲ್ಲಿಯೂ ಇಲ್ಲ. ಅದನ್ನು ಯಾರೂ ಸುಡಲಾರರು, ಕಡಿಯಲಾರರು, ಯಾವ ರೀತಿಯಿಂದಲೂ ಅದಕ್ಕೆ ಅಳಿವಿಲ್ಲ. ಅದು ಸರ್ವವ್ಯಾಪಿಯಾದ ಶಕ್ತಿಯು.

**ಇಲ್ಲಿಹನು ಅಲ್ಲಿಲ್ಲವೆಂಬೀ**
**ಸೊಲ್ಲುಸಲ್ಲದು, ಹೊರಗೊಳಗೆ ನೀ**
**ನಿಲ್ಲದನ್ಯತ್ರವೆಂಬುದನ್ನೆಲ್ಲ ಕೆಲಕೆಲರು**

-ಕನಕದಾಸ

ಒಟ್ಟಿಗೆ, ಅರ್ಜುನನು ಈ ತರಹದ ಜ್ಞಾನದಿಂದ ಯುದ್ಧಮಾಡಿದರೆ ಅಂದರೆ, 'ಕೊಲ್ಲುವವನು ತಾನಲ್ಲ, ಸಾಯುವವರು ಅವರಲ್ಲ, ತಾನು ಪರಮಾತ್ಮನ ಸೇವಕನು ಮಾತ್ರ' ಎಂಬ ಬುದ್ಧಿಯಿಂದ ಯುದ್ಧ ಮಾಡಿದರೆ ಆ ಯುದ್ಧದ ಹೊಣೆಯು ಆತನ ಮೇಲೆ ಉಳಿಯುವುದಿಲ್ಲ.

ಅರ್ಜುನನು ರಾಷ್ಟ್ರಹಿತಕ್ಕಾಗಿ, ಜನತಾಜನಾರ್ದನನ ಸೇವೆಗಾಗಿ ಯುದ್ಧಮಾಡಬೇಕೆಂದು ಕೃಷ್ಣನು ಹೇಳಲಿಲ್ಲ. ಅದು ಜನತಾಜನಾರ್ದನನ ಸೇವೆಯಷ್ಟೇ ಅಲ್ಲ, ಈಶ್ವರನ ಸೇವೆ, ಪರಮಾತ್ಮನ ಪೂಜೆ ಎಂಬ ಹೆಚ್ಚಿನ ಭಾವನೆಯನ್ನು ತಾಳಿ ಯುದ್ಧ ಮಾಡಲಿಕ್ಕೆ ಹೇಳಿರುವನು. ಇಂಥ ಭಾವನೆಯಿಂದ ಯುದ್ಧ ಮಾಡಿದರೇನೇ ಅದು ಮೋಕ್ಷಕ್ಕೆ ಸಾಧನವಾಗುವುದಲ್ಲದೆ, ಮಿಕ್ಕಾವ ಭಾವನೆಯಿಂದ ಮಾಡಿದರೂ ಅದು ಸಾಧನವಾಗುವುದಿಲ್ಲ. ಈ ವಿಷಯದಲ್ಲಿ, ಸಾಮಾನ್ಯತಃ ಶ್ರೀಶಂಕರ, ರಾಮಾನುಜ ಮಧ್ವ ಇವರೇ ಮುಂತಾದವರಲ್ಲಿ ಮತಭೇದವಿರುವುದಿಲ್ಲ. ವೀರಶೈವರಿಗೂ ಇದು ಮಾನ್ಯವಿದೆ. ಇಷ್ಟೇ ಅಲ್ಲ. ಜೈನ ಧರ್ಮಕ್ಕೂ ಬಹ್ವಂಶದಿಂದ ಮಾನ್ಯವಿದೆ. ಅವರು ಈಶ್ವರನನ್ನು ಒಪ್ಪದಿದ್ದರೂ ಮಿಕ್ಕ ಮಾತುಗಳನ್ನು ಒಪ್ಪುತ್ತಾರೆ. ಅವರು ಜೀವಕ್ಕೇನೇ ಸಿದ್ಧಸ್ಥಿತಿಗೆ ಏರಿಸುತ್ತಾರೆ. ಅದು ಏನೇ ಇರಲಿ. ಈ ತರಹದ ಜ್ಞಾನದಿಂದ ಮನುಷ್ಯನಿಗೆ ಯಾವ ಸ್ಥಿತಿಯು ಪ್ರಾಪ್ತವಾಗುತ್ತದೆಂಬ ಬಗ್ಗೆ ಮಾತ್ರ ಅವರೆಲ್ಲರಲ್ಲಿ ತೀಕ್ಷ್ಣವಾದ ಮತಭೇದವಿದೆ. ಅದರಿಂದ ಸೋಹಂ ಸ್ಥಿತಿಯು ಪ್ರಾಪ್ತವಾಗುತ್ತದೆಂದು ಕೆಲವರೂ ಸಿದ್ಧೋಹಂ ಸ್ಥಿತಿಯು ಪ್ರಾಪ್ತವಾಗುತ್ತದೆಂದು ಕೆಲವರೂ ದಾಸೋಹಂ ಸ್ಥಿತಿಯು ಪ್ರಾಪ್ತವಾಗುತ್ತದೆಂದು ಕೆಲವರೂ ವಾದಿಸುತ್ತಾರೆ. ಆ ಸ್ಥಿತಿಯು ಪ್ರಾಪ್ತವಾದಾಗ, ಆತ್ಮಪ್ರತ್ಯಯವು ಉಳಿಯುತ್ತದೆಂದು ಕೆಲವರೂ ಉಳಿಯುವುದಿಲ್ಲವೆಂದು ಕೆಲವರೂ ಹೇಳುತ್ತಾರೆ. ಈ ಸೂಕ್ಷ್ಮ ಭೇದದಲ್ಲಿ ನಾವು ಈಗ ಪ್ರವೇಶಿಸುವುದು ಬೇಡ. ಅರ್ಜುನನ ಮನದಲ್ಲಿ ಆಗ ದ್ವೈತಾದ್ವೈತದ ಆಕ್ಷೇಪವು ಹುಟ್ಟಿತ್ತೆಂದು ನಮಗೆ ಎನಿಸುವುದಿಲ್ಲ. ಆತನ ಮನದಲ್ಲಿ ಜೀವ ಪರಮಾತ್ಮರ ಸ್ವರೂಪ ಮತ್ತು ಸಂಬಂಧಗಳ ಬಗ್ಗೆ ಕೆಲವು ನಿಶ್ಚಿತವಾದ ಕಲ್ಪನೆಗಳು ಇದ್ದಿರಬೇಕೆಂಬುದನ್ನು ನಾವು ಅಲ್ಲಗಳೆಯುವುದಿಲ್ಲ. ಆ ನಿಶ್ಚಿತ ತತ್ವಗಳು ಯಾವುವೆಂಬುದನ್ನು ಹುಡುಕುವ ನಮ್ಮ ಆಚಾರ್ಯರ ಪ್ರಯತ್ನಕ್ಕೂ ನಾವು ಅಡ್ಡಬರುವುದಿಲ್ಲ. ಆದರೆ, ಪ್ರತ್ಯಕ್ಷ ಗೀತೆಯ ಮೇಲಿಂದಲೇ - ಮಿಕ್ಕ ಗ್ರಂಥಗಳ ಸಹಾಯವಿಲ್ಲದೆ ಈ ಪ್ರಶ್ನೆಯು ಬಿಡಿಸಲ್ಪಡಲಾರದೆಂದು ನಾವು ಹೇಳುತ್ತೇವೆ. ಗೀತೆಯಲ್ಲಿ ಈವಾದಕ್ಕೆ ಅನುವುಕೊಡುವಂತೆ ಅದರ ಶಬ್ದರಚನೆಯಿರುತ್ತದೆಂದು ಮಾತ್ರ ನಾವು ಒಪ್ಪುತ್ತೇವೆ.

ಮತ್ತೂ ಒಂದು ರೀತಿಯಿಂದ, ಗೀತೆಯ ಉಪದೇಶದ ಪರಿಮಳವನ್ನು ತೆಗೆಯುವಾಗ ಈ ವಿಷಯಕ್ಕೆ ವಿಶೇಷ ಮಹತ್ವವನ್ನು ಕೊಡುವ ಕಾರಣವಿಲ್ಲವೆಂದು ನಮ್ಮ ಅಭಿಪ್ರಾಯ. ಏಕೆಂದರೆ, ಮನುಷ್ಯನು ಜ್ಞಾನಿಯಾದ ಬಳಿಕ ಆತನ ಸ್ವರೂಪವೆಂಥದು, ಆತನ ಆಚರಣೆಯೆಂಥದಿರಬೇಕು ಎಂಬ ಒಂದೆರಡು ಮಾತುಗಳ ಬಗ್ಗೆ ಮತಭೇದವಿದ್ದರೂ, ಆ ತರಹದ ಸ್ಥಿತಿಯು ಪ್ರಾಪ್ತವಾಗುವವರೆಗೆ, ಮನುಷ್ಯನು ಯಾವ ಮಾರ್ಗವನ್ನವಲಂಬಿಸಬೇಕೆಂಬ ಬಗ್ಗೆ ವಿಶೇಷ ಮತಭೇದವಿಲ್ಲವೆಂಬುದು ಆನಂದದ ಸಂಗತಿಯು, ಏಕೆಂದರೆ, ಇವರೆಲ್ಲರೂ ಜ್ಞಾನದಿಂದಲೇ

ಮೋಕ್ಷವೆಂದು ಹೇಳುವವರು. ಅರ್ಥಾತ್ ಜ್ಞಾನವೆಂದರೆ ಪುಸ್ತಕ ಜ್ಞಾನವಲ್ಲ, ಅನುಭವಜನ್ಯಜ್ಞಾನ. ಇದುವೇ ಅಪರೋಕ್ಷಜ್ಞಾನವೆಂದು ರೂಢಿಯಲ್ಲಿ ಕರೆಯಲ್ಪಡುವ ಜ್ಞಾನವು. ಮೋಕ್ಷವೆಂದರೆ ಅಪುನರಾವೃತ್ತಿಯ ಸ್ಥಿತಿ ಎಂದ ಬಳಿಕ, ಆ ಅನುಭವಜನ್ಯಜ್ಞಾನವು ಹೀಗಿದೆಯೆಂದು ಹೇಳಲು ಬರುವವರಾರು? ಅದು ಹೀಗಿದೆಯೆಂದು ಹೇಳಲಿಕ್ಕೆ ವೇದಾದಿಗಳೇ ಆಧಾರ. ಅವುಗಳಿಗೆ ಅರ್ಥಹಚ್ಚುವುದರಲ್ಲಿ ಮತಭೇದಕ್ಕೆ ಅವಕಾಶವಿರುವುದು ಸಹಜ. ಹೇಗಿದ್ದರೂ, ಎಲ್ಲಿಯವರೆಗೆ ಸಾಧನ ಮಾರ್ಗದಲ್ಲಿ ಭೇದವಿಲ್ಲವೋ ಅಲ್ಲಿಯವರೆಗೆ ಈ ವಾದಕ್ಕೆ ಸಾಮಾನ್ಯ ಜನರು ವಿಶೇಷ ಮಹತ್ವವನ್ನು ಕೊಡುವ ಕಾರಣವಿಲ್ಲ. ಸಾಧನ ಸೋಪಾನ ಪರಂಪರೆಯು ಬಹುಶಃ ಕೊನೆಯವರೆಗೆ ಒಂದೇ ಇರುತ್ತದೆ. ಕೊನೆಕೊನೆಗೆ ಮಾತ್ರ ತುಸು ಕವಲು ಒಡೆಯುತ್ತದೆ. ಇರಲಿ.

ಆದರೆ, ಶ್ರೀಕೃಷ್ಣನು ಅರ್ಜುನನಿಗೆ ಹೇಳಿದ ಉಚ್ಚತರವಾದ ವೇದಾಂತಭಾವನೆಯು ಒಮ್ಮೆಲೆ ಬರುವುದು ಯಾರಿಗೂ ಶಕ್ಯವಿಲ್ಲವೆಂಬುದು ಶ್ರೀಕೃಷ್ಣನಿಗೂ ಗೊತ್ತಿತ್ತು. ಆದಕಾರಣ, ಮನುಷ್ಯನು ಯಾವ ಧಡವನ್ನು ತಲುಪಬೇಕೆಂಬುದನ್ನು ಮುಂಚೆ ತೋರಿಸಿ, ಆಬಳಿಕ, ಮೆಲ್ಲಮೆಲ್ಲನೆ ತನ್ನ ಚುಕ್ಕಾಣಿಯನ್ನು ಆ ಧ್ಯೇಯದ ಕಡೆಗೆ ತಿರುಗಿಸುತ್ತಾನೆ. ಅಂಥ ವೇದಾಂತಸ್ಥಿತಿಯು ಮನಸ್ಸಿಗೆ ಪ್ರಾಪ್ತವಾಗುವವರೆಗೆ ಮನುಷ್ಯನು ಮಾಡತಕ್ಕದ್ದೇನು ಎಂದು ಕೇಳಿದರೆ ಈ ದೇಹಯೋಗ ವಿಯೋಗದ ಸುಖದುಃಖಗಳನ್ನು ಧೈರ್ಯದಿಂದ ಸಹಿಸುವುದೊಂದೇ ಅದಕ್ಕೆ ಉಪಾಯ. 'ಆಗ ಹುಟ್ಟಿ, ಬೇಗ ಸಾಯುವ ಮಾನವಾ' ( ವಚನಶಾಸ್ತ್ರ ಪು. ೧೩ ) 'ಈಗಲೋ ಇನ್ನಾವಾಗಲೋ ಈ ತನು ಪೋಗದಿರದು' (ವಾದಿರಾಜ ಸ್ವಾಮಿಗಳು ) ಎಂಬುದನ್ನು ನೆನಪಿನ ಇಟ್ಟು, ಅದಕ್ಕಾಗಿ ಶೋಕಿಸದಿರುವುದೊಂದೇ ಮಾರ್ಗ.

**ಸತ್ತು ಹುಟ್ಟುವ ಹುಟ್ಟಿ ಹಿಂಗುವ**
**ಸುತ್ತ ತೊಡಕನು ಮಾಣಿಸೆಲೆ ಪುರು-|**
**ಷೋತ್ತಮನೆ ಮನವೊಲಿದು ರಕ್ಷಿಸು ನಮ್ಮನನವರತ**

-ಕನಕದಾಸರು.

ಹೀಗೆ ಅತ್ಯುಚ್ಚತರವಾದ ವೇದಾಂತ ದೃಷ್ಟಿಯಿಂದ ಶ್ರೀಕೃಷ್ಣನು ಉತ್ತರ ಕೊಟ್ಟ ಬಳಿಕ, ಆ ವೇದಾಂತಕ್ಕನುಸಾರವಾದ ಸಾಮಾನ್ಯದೃಷ್ಟಿಯಿಂದಲೂ ಅರ್ಜುನನ ಮನವೊಲಿಸಲು ಪ್ರಯತ್ನಿಸಿರುವನು. ಕೊಲ್ಲಲಿಕ್ಕೆ ಅರ್ಜುನನು ಎಷ್ಟರವನು ಎಂಬುದು ಸಿದ್ಧವಾದರೂ, ಆತನು ಯುದ್ಧವನ್ನೇ ಏಕೆ ಮಾಡಬೇಕೆಂಬುದು ಸಿದ್ಧವಾಗಿಲ್ಲ. 'ಅದು ನನ್ನ ಇಚ್ಛೆ' ಅಥವಾ 'ಅದು ನನ್ನ ಸಂಕಲ್ಪ' ಎಂದು ಹೇಳಿದ ಮಾತ್ರಕ್ಕೆ ಮುಗಿಯಲಿಲ್ಲ. 'ನಾನು ಯುದ್ಧ ಮಾಡಬೇಕೆಂಬುದೇ ನಿನ್ನ ಇಚ್ಛೆ ಏಕೆ' ಎಂಬ ಪ್ರಶ್ನೆಗೆ ಉತ್ತರವನ್ನು ಕೊಡುವುದು ಅವಶ್ಯ. ಅದಕ್ಕೋಸ್ಕರ ಶ್ರೀಕೃಷ್ಣನು ಆಧ್ಯಾತ್ಮಿಕ

ತತ್ವದ ಮೇಲೆ ರಚಿತವಾಗಿರುವ ಸಾಮಾಜಿಕ ದೃಷ್ಟಿಯಿಂದ ಉತ್ತರಕೊಟ್ಟಿದ್ದಾನೆ. ಅದಾವುದೆಂದರೆ ಸ್ವಧರ್ಮದೃಷ್ಟಿ, ಯುದ್ಧ ಮಾಡುವುದು ನಿನ್ನ ಸ್ವಧರ್ಮವು ಅಂದರೆ ಸ್ವಭಾವಧರ್ಮವು, ಆ ಸ್ವಭಾವಕ್ಕನುಗುಣವಾಗಿರುವ ನಿನ್ನ ವರ್ಣಧರ್ಮವು. ಮತ್ತು ಈಗ ನೀನು ಯುದ್ಧ ಮಾಡುವುದರಿಂದಲೇ ಲೋಕಕ್ಕೆ ಕ್ಷೇಮ. ನೀನು ಕ್ಷತ್ರಿಯ ಸ್ವಭಾವದವನು ಮತ್ತು ಕ್ಷತ್ರಿಯ ವರ್ಣದಲ್ಲಿ ಹುಟ್ಟಿದವನು. ಆದಕಾರಣವೇ, ನಾನು ನಿನಗೆ ಯುದ್ಧ ಮಾಡಲು ಹಚ್ಚಿರುವೆನು ಎಂಬುದೇ ಈ ಉತ್ತರದ ತಾತ್ಪರ್ಯ. ಕೊನೆಗೆ, ಕೇವಲ ಲೌಕಿಕ ದೃಷ್ಟಿಯಿಂದ ಯೋಚಿಸಿಯಾದರೂ ಯುದ್ಧಕ್ಕೆ ನಿಲ್ಲಬೇಕೆಂದು ಹೇಳುತ್ತಾನೆ. ಏಕೆಂದರೆ, ಯುದ್ಧ ಮಾಡದಿದ್ದರೆ, ನಿನ್ನ ಕೀರ್ತಿಗೆ ಭಂಗ ಬರುವುದು. ಸಂಭಾವಿತರಿಗೆ ಅಪಕೀರ್ತಿಯು ಮರಣಕ್ಕಿಂತ ಕಡೆ. ಆದರೆ, ಇದು ಗೌಣ ಉತ್ತರವು, ಮುಖ್ಯ ಉತ್ತರವಲ್ಲ. ಒಟ್ಟಿಗೆ, ಇಲ್ಲಿಯವರೆಗೆ ಹೇಳಿದುದರ ತಾತ್ಪರ್ಯವನ್ನು ಸ್ವಲ್ಪದರಲ್ಲಿ ಹೇಳುವುದಾದಲ್ಲಿ 'ಯುದ್ಧ ಮಾಡುವುದುನನ್ನ ಇಚ್ಛೆ, ನಿನ್ನ ಕರ್ತವ್ಯ' ಎಂಬುದಾಗಿ ಹೇಳಿ ಸಮಾರೋಪ ಮಾಡಬಹುದು.

## ಅಪರೋಕ್ಷಜ್ಞಾನಕ್ಕೆ ಉಪಾಯ

ಶ್ರೀಕೃಷ್ಣನು ಇಲ್ಲಿ ವೇದಾಂತದ ಸೂಕ್ಷ್ಮವಿವೇಚನೆಯಲ್ಲಿ ಸೇರಿಲ್ಲ. ವ್ಯವಹಾರಕ್ಕೆ ಎಷ್ಟು ಅಗತ್ಯವೋ ಅಷ್ಟೇ ಸಿದ್ಧಾಂತಗಳನ್ನು ಹೇಳಿರುವನು. ಆ ಮುಖ್ಯ ಸಿದ್ಧಾಂತಗಳು ಯಾವುವೆಂದರೆ, ತಾನು ಎಂದರೆ ದೇಹವಲ್ಲ, ಜೀವನು. ಪರಮಾತ್ಮನ ಇಚ್ಛೆಯನ್ನನುಸರಿಸಿ, ತನ್ನ ಸ್ವಧರ್ಮವನ್ನು ಮಾಡುವುದೇ ಆತನ ಕರ್ತವ್ಯ. ಹಾಗೆ ಕರ್ತವ್ಯವನ್ನು ಮಾಡುವ ಹೊತ್ತಿನಲ್ಲಿ, ಲಾಭಾಲಾಭ, ಜಯಾಜಯ, ಸುಖದುಃಖ ಇವೇ ಮುಂತಾದ ಯಾವ ವಿಚಾರವನ್ನೂ ಆತನು ಮನಸ್ಸಿನಲ್ಲಿ ತರಕೂಡದು. ಇಂಥ ಜ್ಞಾನವು ಒಮ್ಮೆಲೆ ಪ್ರಾಪ್ತವಾಗುವುದಿಲ್ಲ. ಈ ಸಿದ್ಧಾಂತಗಳನ್ನು ಬಾಯಿಯಿಂದ ಹೇಳುವುದು ಬಲು ಸುಲಭ. ಆದರೆ ಅವನ್ನು ಆಚರಣೆಯಲ್ಲಿ ತರಲಿಕ್ಕೆ ಎಷ್ಟೋ ಜನ್ಮಗಳ ಸಾಧನೆಯು ಬೇಕಾಗುತ್ತದೆ. ಆ ಸಾಧನೆಗಳು ಯಾವುವೆಂಬುದನ್ನು ಹೇಳದಿದ್ದರೆ ಪ್ರಯೋಜನವೇನು? ಆದಕಾರಣ, ಶ್ರೀಕೃಷ್ಣನು ಅಂಥ ಜ್ಞಾನವನ್ನು ಗಳಿಸುವುದಕ್ಕೆ ಬೇಕಾಗುವ ಉಪಾಯವನ್ನು ಅಂದರೆ ಯೋಗವನ್ನು ಹೇಳುತ್ತಾನೆ. ಅಂಥ ಜ್ಞಾನಕ್ಕೆ ಮುಖ್ಯ ಸಾಧನಗಳು ಎರಡು (೧) ಕರ್ಮಯೋಗ (೨) ಧ್ಯಾನಯೋಗ, ಇವುಗಳಲ್ಲಿ ಕರ್ಮಯೋಗದ ವಿವೇಚನೆಯು ೫ನೆಯ ಅಧ್ಯಾಯದ ಕೊನೆಯವರೆಗೆ ಬಂದಿದ್ದು ಆರನೆಯದರಲ್ಲಿ ಧ್ಯಾನಯೋಗವು ಬಂದಿದೆ. ಈ ಎರಡನೆಯ ಅಧ್ಯಾಯದಲ್ಲಿ, ಯೋಗದ ಸಾಮಾನ್ಯ ವಿವೇಚನೆಯು ಮೊದಲಿಗೆ ಬಂದಿದೆ. ಅದರ

ತಾತ್ಪರ್ಯವೇನೆಂದರೆ, ಈ ಸಾಧನಮಾರ್ಗವನ್ನು ಕೈಕೊಂಡವರಿಗೆ ಎಂದೆಂದಿಗೂ ಹಾನಿಯಿಲ್ಲ. ಎಷ್ಟು ಮಾಡುವರೋ ಅಷ್ಟಕ್ಕೇನೇ ತಕ್ಕ ಫಲ ಸಿಕ್ಕುತ್ತದೆ. ನಡುವೆ ಬಿಟ್ಟರೂ ಅಂಜಿಕೆಯಿಲ್ಲ. ಬಿಟ್ಟಲ್ಲಿಂದ ಮುಂದೆ ಪ್ರಾರಂಭಿಸಲಿಕ್ಕೆ ಬರುತ್ತದೆ. ಈ ಸಾಧನಮಾರ್ಗವು ಯಾವುದೆಂದರೆ ಫಲಾಶೆಯನ್ನು ಬಿಟ್ಟು, ದೇವರಲ್ಲಿ ಮನಸ್ಸಿಟ್ಟು ಕರ್ಮಮಾಡಬೇಕು. ವೇದಗಳಲ್ಲಿ ಸ್ವರ್ಗಕ್ಕಾಗಿ ಮತ್ತು ಭೋಗಕ್ಕಾಗಿ ಕರ್ಮಮಾಡಲಿಕ್ಕೆ ಹೇಳಿರುವಂತೆ ಮೊದಲಿಗೆ ಭಾಸವಾಗುತ್ತದೆ. ಆದರೆ ಅದು ವೇದಗಳ ತೋರಗಾಣಿಕೆ ಅರ್ಥ. ನಿಜವಾಗಿ ವೇದಗಳು ಹೀಗೆ ಐಹಿಕ ಅಥವಾ ಪಾರಲೌಕಿಕ ಭೋಗಗಳ ಆಶೆಗಾಗಿ ಕರ್ಮಮಾಡಲು ಹೇಳುವುದಿಲ್ಲ. ಫಲದಲ್ಲಿ ಆಶೆಯಿಟ್ಟವನ ಮನಸ್ಸು ಪರಮಾತ್ಮನ ಕಡೆಗೆ ಹತ್ತುವುದಿಲ್ಲ. ಆದಕಾರಣ, ಮನುಷ್ಯನು ಫಲದಲ್ಲಿ ಆಸಕ್ತನಾಗಬಾರದು ಏಕೆಂದರೆ, ಫಲದಲ್ಲಿ ಆತನಿಗೆ ಅಧಿಕಾರವೇ ಇಲ್ಲ. ಫಲಕೊಡುವವನು ಬಿಡುವವನು ಪರಮಾತ್ಮನು. ಸಿದ್ಧಿ ಅಸಿದ್ಧಿಗಳಲ್ಲಿ ಸಮಭಾವವನ್ನಿಟ್ಟು ಕರ್ಮಮಾಡುತ್ತಲೇ ಹೋಗಬೇಕು. ಅಲ್ಲದೆ, ಕರ್ಮಮಾಡುವುದನ್ನು ಬಿಡುವ ವಿಚಾರವನ್ನೂ ಮನದಲ್ಲಿ ತರ ಕೂಡದು. ಈ ಬಗೆಯಾಗಿ ಕರ್ಮಮಾಡುತ್ತ ಹೋಗುವುದರಿಂದ ಹಿಂದೆ ಹೇಳಿದ ಅಪರೋಕ್ಷ ಜ್ಞಾನವು ಪ್ರಾಪ್ತವಾಗುತ್ತದೆ. ಈ ಪ್ರಕಾರವಾಗಿ, ಕರ್ಮಗಳನ್ನು ಪರಮಾತ್ಮನಿಗೆ ಸಮರ್ಪಿಸಿ, ಫಲಾಶೆಯನ್ನು ಬಿಟ್ಟು ಕರ್ಮಮಾಡುವುದೇ ಕರ್ಮಯೋಗವು. ಈ ಕರ್ಮಯೋಗದ ಫಲವು ಜ್ಞಾನವು, ಜ್ಞಾನದ ಫಲವು ಮೋಕ್ಷವು, ಹೀಗೆ ಕರ್ಮಗಳನ್ನು ಮಾಡುತ್ತಿರುವಾಗ ಪರಮಾತ್ಮನಲ್ಲಿ ಮನಸ್ಸನ್ನಿಡಬೇಕೆಂದು ಹೇಳಿತಷ್ಟೆ. ಪರಮಾತ್ಮನಲ್ಲಿ ಮನಸ್ಸನ್ನು ನಿಶ್ಚಲವಾಗಿ ಇಡುವುದೇ ಧ್ಯಾನಯೋಗ ಕರ್ಮಯೋಗವನ್ನು ಮಾಡುತ್ತ ಮಾಡುತ್ತ ಹೋದಂತೆ ಪರಮಾತ್ಮನ ಕಡೆಗೆ ಮನಸ್ಸನ್ನಿಡುವ ಚಟವು ಬೀಳುತ್ತದೆ, ಅಂದರೆ ಧ್ಯಾನವು ಸಾಧಿಸುತ್ತದೆ. ಆಗ, ಮನುಷ್ಯನಿಗೆ ಯೋಗಸಿದ್ಧಿಯಾಯಿತೆಂದು ತಿಳಿಯಬೇಕು.

## ಸ್ಥಿತಪ್ರಜ್ಞನ ಅಂದರೆ ಜ್ಞಾನಿಯ ಲಕ್ಷಣಗಳು

ಹೀಗೆ ಕರ್ಮಯೋಗದ ಮೂಲಕ ಧ್ಯಾನವು ಸಾಧ್ಯವಾಗುತ್ತದೆಂದೂ ಅದರಿಂದ ಜ್ಞಾನವು ಉತ್ಪನ್ನವಾಗುತ್ತದೆಂದೂ ಹೇಳಿತು. ಅಂಥ ಜ್ಞಾನಿಯ ಲಕ್ಷಣಗಳು ಯಾವುವೆಂಬುದನ್ನು ತಿಳಿದುಕೊಂಡಿರುವುದು ಅವಶ್ಯ. ಏಕೆಂದರೆ, ಮೋಕ್ಷವು ಕೊನೆಯ ಪುರುಷಾರ್ಥವಾದರೂ ಅದರಲ್ಲಿಯ ಸ್ಥಿತಿಯನ್ನು ತಿಳಿಯುವುದು ನಮಗೆ ಸಹಸಾ ಶಕ್ಯವಿಲ್ಲ. ಆದರೆ, ಮೋಕ್ಷಕ್ಕೆ ಅತ್ಯಂತ ಸಮೀಪವರ್ತಿಯಾದ ಸ್ಥಿತಿಯೆಂದರೆ ಸ್ಥಿತಪ್ರಜ್ಞನ ಅಂದರೆ ಜ್ಞಾನಿಯ ಸ್ಥಿತಿ. ಅಂಥವರಿಗೇನೇ

ಅಪರೋಕ್ಷ ಜ್ಞಾನಿಗಳೆನ್ನುತ್ತಾರೆ. ಇಂಥವರ ಮನಃಸ್ಥಿತಿಯನ್ನು ತಿಳಿದುಕೊಳ್ಳುವುದು ಸುಲಭ. ಏಕೆಂದರೆ, ಅಂಥವರು ನಮ್ಮ ಕಣ್ಣೆದುರಿಗೆ ಇರುತ್ತಾರೆ. ಅಂಥವರನ್ನು ಧ್ಯೇಯವಾಗಿ ಇಟ್ಟುಕೊಂಡು ಅವರಲ್ಲಿ ಕಂಡುಬರುವ ಲಕ್ಷಣಗಳನ್ನು ನಾವೂ ನಮ್ಮ ಆಚರಣೆಯಲ್ಲಿ ಆದಷ್ಟು ಮಟ್ಟಿಗೆ ತರಲೆತ್ನಿಸುವುದು ಸಾಧ್ಯವಿದೆ. ಅಂಥ ಜ್ಞಾನಿಗಳ ಮುಖ್ಯ ಲಕ್ಷಣವೆಂದರೆ, ಅಂಥವರು ಸರ್ವಕಾಮಗಳನ್ನು ಬಿಟ್ಟು ಪರಮಾತ್ಮನಲ್ಲಿ ಸದಾ ಸಂತುಷ್ಟರಾಗಿರುತ್ತಾರೆ. ಸರ್ವಕಾಮಗಳನ್ನು ಬಿಡುವುದಕ್ಕೇನೇ ಗೀತೆಯಲ್ಲಿ ಸಂನ್ಯಾಸವೆಂದು ಹೆಸರು. ಈಗಿನ ಕಾಲದಲ್ಲಿ ಅದಕ್ಕೆ ವೈರಾಗ್ಯ ಬುದ್ಧಿಯೆನ್ನುವ ರೂಢಿಯುಂಟು. ಪರಮಾತ್ಮನಲ್ಲಿ ಮನಸ್ಸಿಡುವುದಕ್ಕೇನೇ ಯೋಗವೆಂದೆನ್ನುತ್ತಾರೆ. ಈ ಯೋಗ ಶಬ್ದವು ಗೀತೆಯ ವಿಶಿಷ್ಟ ಶಬ್ದವು. ಈ ೨ನೆಯ ಅಧ್ಯಾಯದಲ್ಲಿ ಯೋಗದ ವಿಷಯವು ವಿಸ್ತಾರದಿಂದ ಬಂದಿಲ್ಲ. ಸಂನ್ಯಾಸವು ಮಾತ್ರ ವಿಸ್ತಾರದಿಂದ ಬಂದಿದೆ. ಅದರ ತಾತ್ಪರ್ಯವೇನೆಂದರೆ ಸರ್ವಕಾಮಗಳನ್ನು ಬಿಡುವುದೆಂದರೇನು ಎಂದು ಕೇಳಬಹುದು. ದುಃಖಬಂದಾಗ ಉದ್ವಿಗ್ನರಾಗದಿರುವುದು, ಸುಖಬಂದಾಗ ಉಬ್ಬದಿರುವುದು. ಸಾರಾಂಶ, ರಾಗ, ಭಯ, ಕ್ರೋಧಾದಿಗಳನ್ನು ಬಿಡುವುದು. ಇಂಥವನಿಗೆ ಏತರಲ್ಲಿಯೂ ವಿಶೇಷ ಸ್ನೇಹ ಅಥವಾ ಮೋಹವಿರುವುದಿಲ್ಲ. ಶುಭಾಶುಭಗಳು ಎರಡೂ ಆತನಿಗೆ ಸಮಾನವಾಗಿರುತ್ತವೆ. ಮೇಲ್ಕಾಣಿಸಿದ ಗುಣಗಳು ಮನುಷ್ಯನಲ್ಲಿ ಉಂಟಾಗುವುದಕ್ಕೆ ಉಪಾಯವೆಂದರೆ ಇಂದ್ರಿಯಜಯ. ಆವೆಯು ತನ್ನ ಅವಯವಗಳನ್ನು ಬೇಕಾದಾಗ ಒಳಗೆ ಸೆಳೆದುಕೊಳ್ಳುವುದಕ್ಕೆ ಸಮರ್ಥವಿದ್ದಂತೆ, ಮನುಷ್ಯನು ಬೇಕಾದಾಗ ತನ್ನ ಇಂದ್ರಿಯಗಳನ್ನು ಸೆಳೆದುಕೊಳ್ಳಲು ಸಮರ್ಥನಾಗಬೇಕು. ಆದರೆ ಹೀಗೆ ಇಂದ್ರಿಯ ಜಯವನ್ನು ಸಂಪಾದಿಸುವುದೂ ಸುಲಭವೆಂದು ತಿಳಿಯಬೇಡಿರಿ. ನಿರಾಹಾರದಿಂದ ಅದು ಕೆಲಮಟ್ಟಿಗೆ ಸಾಧ್ಯವಾಗುತ್ತದೆ. ಏಕೆಂದರೆ ಅದರಿಂದ ಇಂದ್ರಿಯಗಳ ಶಕ್ತಿಯು ಕ್ಷೀಣವಾಗುತ್ತದೆ. ಆದರೆ, ಇಂದ್ರಿಯ ಜಯವು ಸಂಪೂರ್ಣವಾಗಿ ಸಾಧ್ಯವಾಗಬೇಕಾದರೆ, ಪರಮಾತ್ಮನ ಜ್ಞಾನವೇ ಬೇಕು. ಅಲ್ಲಿಯವರೆಗೆ ಇಂದ್ರಿಯಗಳನ್ನು ಸಂಯಮನಮಾಡುವ ಅಭ್ಯಾಸವನ್ನಿಡಬೇಕು. ಅದಕ್ಕೋಸ್ಕರ ಮನೋಜಯವನ್ನು ಸಂಪಾದಿಸಬೇಕು. ಮನಸ್ಸನ್ನು ಬಿಗಿಹಿಡಿಯುವ ಅಭ್ಯಾಸವಿಲ್ಲದಿದ್ದರೆ ಇಂದ್ರಿಯಗಳು ಮನುಷ್ಯನ ವಶಕ್ಕೆ ಬರಲಾರವು. ಹೀಗೆ, ಮನಸ್ಸನ್ನು ಮೆಲ್ಲಮೆಲ್ಲನೆ ಬಿಗಿಹಿಡಿಯುತ್ತ, ಇಂದ್ರಿಯಗಳನ್ನು ತನ್ನ ವಶಕ್ಕೆ ತಂದುಕೊಳ್ಳಬೇಕು. ಪರಮಾತ್ಮನ ಕಡೆಗೆ ಹೆಚ್ಚೆಚ್ಚು ಮನಸ್ಸನ್ನು ಹಚ್ಚುತ್ತ ಹೋಗುವುದರಿಂದ, ವಿಷಯಗಳಿಂದ ಮನಸ್ಸು ಪರಾವೃತ್ತವಾಗಲಿಕ್ಕೆ ಕಾರಣವಾಗುತ್ತದೆ. ಒಟ್ಟಿಗೆ, ಇವು ಒಂದನ್ನೊಂದು ಅವಲಂಬಿಸಿರುತ್ತವೆ. ಒಮ್ಮೆಲೆ ಯಾವುದೂ ಸಾಧ್ಯವಾಗುವುದಿಲ್ಲ. ಒಂದು ಸಾಧನವನ್ನು ಕೈಕೊಂಡು ಅದನ್ನು ಸಾಧಿಸುತ್ತ ಹೋದಂತೆ ಅದರ ಪರಿಣಾಮವು ಮತ್ತೊಂದರ ಮೇಲೆ ಆಗುತ್ತ ಹೋಗುತ್ತದೆ. ಕೊನೆಗೆ

ಮನಃಪ್ರಸಾದವು ಉಂಟಾಗುತ್ತದೆ. ಮನಃಪ್ರಸಾದವೆಂದರೆ ಮನಸ್ಸು ಭೋಗಗಳ ಕಡೆಗೆ ಸಹಜವಾಗಿಯೇ ಹರಿಯದಿರುವುದು. ಆಗ ದುಃಖಹಾನಿಯಾಗುತ್ತದೆ. ಆದಕಾರಣ, ಇಂದ್ರಿಯಗಳನ್ನು ಮನಸ್ಸಿನಿಂದ ಬಿಗಿಹಿಡಿಯುತ್ತ ಹಿಡಿಯುತ್ತ, ಮನಸ್ಸನ್ನು ಪರಮಾತ್ಮನಲ್ಲಿ ಇಡುವ ಅಭ್ಯಾಸವಿಡಬೇಕು. ಇಂದ್ರಿಯ ಜಯಕ್ಕೆ ಅದೇ ಮುಖ್ಯ ಉಪಾಯ. ಅದಕ್ಕಿಂತ ಕಡಿಮೆಯ ಉಪಾಯವೆಂದರೆ ರಾಗದ್ವೇಷಗಳನ್ನು ಬಿಡುವುದು.

ಈ ಪ್ರಕಾರ ಇಂದ್ರಿಯಜಯ ಮನೋಜಯಗಳನ್ನು ಸಂಪಾದಿಸಿದವನು ಲೋಕವಿಲಕ್ಷಣನಾಗಿರುತ್ತಾನೆ. ಸಾಮಾನ್ಯ ಜನರಂತೆ ಆತನ ಆಚರಣೆಯಿರುವುದಿಲ್ಲ. ಪಾಮರರಿಗೆ ಏತರಲ್ಲಿ ಪ್ರೀತಿಯೋ ಅದರಲ್ಲಿ ಆತನಿಗೆ ತಿರಸ್ಕಾರ. ಪಾಮರರಿಗೆ ಏತರಲ್ಲಿ ಪ್ರೀತಿಯಿಲ್ಲವೋ ಅದರಲ್ಲಿ ಆತನಿಗೆ ಪ್ರೀತಿ. ಸಾಮಾನ್ಯವಾಗಿ ಭೋಗಗಳಲ್ಲಿ ಪಾಮರರಿಗೆ ಪ್ರೀತಿ, ಆತನಿಗೆ ಅವು ಬೇಡ. ಪಾಮರರ ಲಕ್ಷವು ಪರಮಾತ್ಮನ ಕಡೆಗೆ ಹತ್ತಿರುವುದಿಲ್ಲ. ಆತನ ಲಕ್ಷವು ಯಾವಾಗಲೂ ಪರಮಾತ್ಮನ ಕಡೆಗೆ ಇರುತ್ತದೆ. ಅಂಥವನು ಜಗತ್ತಿನಲ್ಲಿ ಎಲ್ಲರೂ ಇರುವಂತೆಯೇ ಇರುತ್ತಾನೆ, ತಾವೇ ಬಂದ ಭೋಗಗಳನ್ನೂ ಕೂಡ ಅನುಭವಿಸುತ್ತಾನೆ. ಆದರೆ, ಸಮುದ್ರದಲ್ಲಿ ನದಿಗಳು ಎಷ್ಟು ಸೇರಿದರೂ ಸಮುದ್ರವು ಹೇಗೆ ಸದಾ ಗಂಭೀರವೇ ಆಗಿರುತ್ತದೆಯೋ ಹಾಗೆ ಆತನು ಎಷ್ಟೇ ಭೋಗಗಳನ್ನು ಅನುಭವಿಸಿದರೂ ಅವುಗಳಿಂದ ಚಲಚಿತ್ತನಾಗುವುದಿಲ್ಲ. ಅವುಗಳನ್ನು ನಿರ್ಮಲತ್ವದಿಂದಲೂ ನಿರಹಂಕಾರದಿಂದಲೂ ಭೋಗಿಸುತ್ತಾನೆ.

ಬ್ರಾಹ್ಮೀಸ್ಥಿತಿಯೆಂದರೆ ಇದೇ. ಪರಮಾತ್ಮನಲ್ಲಿಯೇ ಯಾವಾಗಲೂಯ ತಲ್ಲೀನನಾಗಿರುವ ಸ್ಥಿತಿ. ಇಂಥ ಮನಃಸ್ಥಿತಿಯುಂಟಾದವರಿಗೆ ಮೋಹವಿಲ್ಲ. ಮತ್ತು ಇಂಥ ಮನಃಸ್ಥಿತಿಯು ಮರಣಕಾಲದಲ್ಲಯೂ ಕೂಡ ಉಳಿಯಿತೆಂದರೆ ಮೋಕ್ಷವು ಕಟ್ಟಿಟ್ಟದ್ದೇ.

೮ನೆಯ ಪ್ರಕರಣಿ

( ೩ ನೆಯ ಅಧ್ಯಾಯದ ತಾತ್ಪರ್ಯ)

# ಕರ್ಮಯೋಗದ ತಿರುಳು

ಮೋಕ್ಷವೇ ಮನುಷ್ಯನ ಪರಮಧ್ಯೇಯವು. ಮೋಕ್ಷವೆಂದರೆ ಜನನ ಮರಣದ ಸುತ್ತಿನಿಂದ ಬಿಡುಗಡೆಹೊಂದುವುದು. ಅಂಥ ಸ್ಥಿತಿಯು ಮನುಷ್ಯನಿಗೆ ಪ್ರಾಪ್ತವಾಗುವದು ಶಕ್ಯವಿದೆಯೆಂದೂ ಅದೇ ನಾವು ಪಡೆಯಬಹುದಾದ ಅತ್ಯುತ್ಕೃಷ್ಟಸ್ಥಿತಿಯೆಂದೂ ನಮ್ಮ ಸನಾತನ ಧರ್ಮದ ವಿಶ್ವಾಸ. ಆ ಮೋಕ್ಷವನ್ನು ಪಡೆಯುವುದಕ್ಕೆ ಈ ಜಗತ್ತಿನಲ್ಲಿರುವಾಗ ಮನುಷ್ಯನು ಹೇಗೆ ಇರಬೇಕಾಗುತ್ತದೆಂಬುದನ್ನು ಹೇಳುವುದು ಅವಶ್ಯ. ಮನುಷ್ಯನು ತಾನು ಯಾರು, ತನಗೂ ಪರಮಾತ್ಮನಿಗೂ ಸಂಬಂಧವೇನು ಇವೇ ಮುಂತಾದವುಗಳ ಜ್ಞಾನಮಾಡಿಕೊಂಡು ಆ ಜ್ಞಾನಾವಸ್ಥೆಯಲ್ಲಿ ಪ್ರತಿಯೊಂದು ಕರ್ಮಮಾಡುತ್ತಿರುವುದೇ ಮುಖ್ಯ ಸಾಧನ. ಎಂದರೆ ಮೋಕ್ಷಕ್ಕೆ ಮುಖ್ಯ ಸಾಧನ ಈ ತರಹದ ಜ್ಞಾನ ಈ ತರಹದ ಜ್ಞಾನವುಂಟಾಗುವುದಕ್ಕೆ ಕರ್ಮಯೋಗವು ಸಾಧನ ಎಂಬುದೇ ಇಲ್ಲಿಯವರೆಗೆ ಹೇಳಿದುದರ ಮುಖ್ಯ ತಾತ್ಪರ್ಯ. ಇನ್ನು ಮೂರನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಆ ಕರ್ಮಯೋಗದ ತಿರುಳನ್ನು ಕೊಟ್ಟಿದ್ದಾನೆ. ಕರ್ಮಯೋಗವೆಂದರೇನು, ಕರ್ಮವನ್ನು ಏಕೆ ಮಾಡಬೇಕು, ಹೇಗೆ ಮಾಡಬೇಕು ಎಂಬಿವೇ ವಿಷಯಗಳು ಇದರಲ್ಲಿ ಬಂದಿವೆ.

ಪರಮಾತ್ಮನ ಜ್ಞಾನವೇ ಮೋಕ್ಷಕ್ಕೆ ಮುಖ್ಯವಾಗಿದ್ದ ಬಳಿಕ, ಅಂಥ ಬೌದ್ಧಿಕಜ್ಞಾನವನ್ನು ಗಳಿಸಿದರೆ ಆಗಲಿಲ್ಲವೆ? ನಿಷ್ಕಾರಣವಾಗಿ ಕರ್ಮದ ಗೊಂದಲದಲ್ಲಿ ಏಕೆ ಬೀಳಬೇಕು ಎಂಬ ಪ್ರಶ್ನೆಯು ಉಪಸ್ಥಿತವಾಗುತ್ತದೆ. ಅದಕ್ಕೆ ಉತ್ತರವೇನೆಂದರೆ ಕರ್ಮವನ್ನು ಬಿಡುವುದು ಮೂಲತಃ ಶಕ್ಯವೇ ಇಲ್ಲ. ಮನುಷ್ಯನು ಹುಟ್ಟಿದಂದಿನಿಂದ ಸಾಯುವವರೆಗೆ ಒಂದಿಲ್ಲೊಂದು ತರಹದ ಕರ್ಮವನ್ನು ಮಾಡುತ್ತಲೇ ಇರಬೇಕಾಗುತ್ತದೆ. ಹಾಗೆ ಮಾಡದಿದ್ದರೆ, ಆತನು ಒಂದು ಕ್ಷಣ ಸಹ ಬದುಕಲಾರನು. ಊಟಮಾಡುವುದು, ರೆಪ್ಪೆ ಬಡೆಯುವುದು, ಶ್ವಾಸೋಚ್ಛ್ವಾಸ ಬಿಡುವುದು ಇವು ಸಹ ಕರ್ಮಗಳೇ. ಆದಕಾರಣ, ಯಾವತ್ತು ಕರ್ಮಗಳನ್ನು ಬಿಡಬೇಕೆಂಬ ಕಲ್ಪನೆಯನ್ನು ಕೂಡ ಮನಸ್ಸಿನಲ್ಲಿ ತರಬಾರದು. 'ಜೀವದಿಂದಿರುವುದಕ್ಕೆ ಬೇಕಾಗುವ ಆವಶ್ಯಕ ಕರ್ಮಗಳನ್ನು ಬಿಡುವುದು ಶಕ್ಯವೇ ಇಲ್ಲದ್ದರಿಂದ, ಅವನ್ನು ಮಾಡಲಿ; ಆದರೆ ಬಿಡಲಿಕ್ಕೆ ಬರಬಹುದಾದ ಕರ್ಮಗಳನ್ನು ಬಿಡಲು ಅಡ್ಡಿ ಏನಿದೆ'? ಎಂಬ ಪ್ರಶ್ನೆಯು ಮುಂದೆ ಹೊರಡುತ್ತದೆ. ಅವರ

ಅಂಬೋಣವೇನೆಂದರೆ "ಹಾಗೆ ಮಾಡಿದರೆ ಫಲಾಶೆಯನ್ನು ಬಿಟ್ಟು, ನಿಷ್ಕಾಮದಿಂದ ಕರ್ಮಮಾಡಬೇಕೆಂಬ ಪ್ರಶ್ನೆಗೆ ಅವಕಾಶವೇ ಉಳಿಯುವುದಿಲ್ಲ. ಸಂನ್ಯಾಸಾಶ್ರಮವನ್ನು ಬಿಟ್ಟರೆ, ಮಿಕ್ಕ ಆಶ್ರಮಗಳಲ್ಲಿ ಮಾಡಲ್ಪಡುವ ಕರ್ಮಗಳಿಗೆಲ್ಲವುಗಳಿಗೂ ಒಂದಿಲ್ಲೊಂದು ಫಲವು ಇದ್ದೇ ಇರುತ್ತದೆ. ಸಂನ್ಯಾಸಾಶ್ರಮದ ಕರ್ಮಗಳಿಗೆ ಮಾತ್ರ ಪರಮಾತ್ಮ ಪ್ರಾಪ್ತಿಯ ಹೊರ್ತಾಗಿ ಯಾವ ಫಲವೂ ಹೇಳಲ್ಪಡುವುದಿಲ್ಲ. ಪರಮಾತ್ಮಪ್ರಾಪ್ತಿಯ ಫಲಾಶೆಯನ್ನು ಬಿಡಿರೆಂದು ಮಾತ್ರ ಯಾರೂ ಹೇಳಲಾರರು. ಆದಕಾರಣ, ಮಿಕ್ಕ ಆಶ್ರಮಗಳನ್ನೆಲ್ಲ ತೊರೆದು, ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಈಶ್ವರ ಚಿಂತನೆಯಲ್ಲಿ ಮಗ್ನವಾಗುವುದರಿಂದ ಮೋಕ್ಷ ಸಿಕ್ಕುತ್ತದಲ್ಲವೇ"- ಎಂದು ಈ ಆಕ್ಷೇಪಕರು ಕೇಳುವುದು ಸಹಜವಿದೆ. "ಫಲಾಶೆಯನ್ನು ಬಿಟ್ಟು ಕರ್ಮಗಳನ್ನು ಮಾಡಿದರೆ, ಅದರಿಂದಲೂ ಪರಮಾತ್ಮನ ಜ್ಞಾನವಾಗುತ್ತದೆಂದು ಹೇಳಿರುವೆವಲ್ಲಾ" ಎಂದು ನಾವು ಉತ್ತರಕೊಟ್ಟರೆ ಅಹುದು ಹಾಗೆ ಹೇಳಿದ್ದು ನಿಜ. ಆದರೆ ಕರ್ಮಗಳನ್ನು ಮುಂಚೆ ಮಾಡಬೇಕು, ಮತ್ತು ಅದರಿಂದಾಗುವ ದುಷ್ಪರಿಣಾಮಗಳನ್ನು ತಪ್ಪಿಸುವುದಕ್ಕಾಗಿ, ಅವುಗಳ ಫಲಾಶೆಯನ್ನು ಬಿಡಬೇಕು. ಇದೆಲ್ಲಿಯ ನ್ಯಾಯ? ಹೀಗೆ ಗುಡ್ಡ ಸುತ್ತಿಕೊಂಡು ಮೈಲಾರಕ್ಕೆ ಹೋಗುವುದೇಕೆ? ಅದಕ್ಕಿಂತ, ಸುಸೂತ್ರವಾಗಿ ಕರ್ಮಗಳನ್ನು ಬಿಡುವುದೇ ಒಳಿತಲ್ಲವೇ" ಎಂದು ಆಕ್ಷೇಪಕನು ಕೇಳಿದರೆ ಅಲ್ಲ, ಅದು ಒಳಿತಾದ ಉಪಾಯವಲ್ಲವೆಂದು ಶ್ರೀಕೃಷ್ಣನು ಹೇಳುತ್ತಾನೆ. ಏಕೆಂದರೆ, ಸಂನ್ಯಾಸಿಗೆ ಕರ್ಮಗಳೇ ಇಲ್ಲವೆಂದು ಹೇಳಿದಿಯಲ್ಲವೇ? ಅದೇ ಮೂಲತಃ ತಪ್ಪು, ಹೇಗೆ ಮಿಕ್ಕ ಆಶ್ರಮಿಗಳಿಗೆ ಕರ್ಮಗಳನ್ನು ಮಾಡಬೇಕಾಗಿರುವುದೋ ಹಾಗೆ ಸಂನ್ಯಾಸಿಗೂ ಮಾಡಬೇಕಾಗುವುದು. ಮಾಡತಕ್ಕ ಕರ್ಮಗಳ ಸ್ವರೂಪ ಬೇರೆ, ಮತ್ತು ಆತನಿಗೆ ಬಾಹ್ಯಕರ್ಮಗಳ ಜೊಂಜಾಟ ಕಡಿಮೆ. ಇಷ್ಟೇ ಭೇದ. ಆದಕಾರಣ ಫಲಾಶೆಯನ್ನು ಬಿಡಬೇಕೆಂಬ ವಿಧಿಯು ಆತನಿಗೂ ಬಿಟ್ಟದ್ದೇ ಅಲ್ಲ. ಇದಲ್ಲದೆ, ಸಂನ್ಯಾಸಿಯು ಮಾಡತಕ್ಕ ಕರ್ಮಗಳು ಅಲ್ಪೇ ಇದ್ದರೂ ಅವು ಕಠಿನವಾಗಿರುತ್ತವೆ. ಉದಾ: ದೇವರ ಧ್ಯಾನಮಾಡುವ ಮಾನಸಿಕ ಕರ್ಮವನ್ನು ಆತನಿಗೆ ಮಾಡಬೇಕಾಗುತ್ತದೆ. ಅದು ಸುಲಭಸಾಧ್ಯವಲ್ಲ, ಆದಕಾರಣ, ಸಂನ್ಯಾಸಾಶ್ರಮವನ್ನು ತೆಗೆದುಕೊಳ್ಳಲಿಕ್ಕೆ ಹೆಚ್ಚಿನ ಅಧಿಕಾರ ಬೇಕಾಗುತ್ತದೆ. ಕರ್ಮಗಳಿಗೆ ನೀವು ಇಷ್ಟು ಹೆದರುವ ಕಾರಣವೇನು? 'ಕರ್ಮಗಳು ಕಾಲ್ತೊಡಕುಗಳು: ಏಕೆಂದರೆ, ಅವು ಒಂದಿಲ್ಲೊಂದು ಫಲಗಳನ್ನು ಕೊಡುತ್ತವೆ. ಫಲಗಳನ್ನು ನಾವು ಬಯಸುವುದರಿಂದ ವಿಷಯಗಳ ಕಡೆಗೆ ಮನಸ್ಸು ಹೋಗುತ್ತದೆ. ಪರಮಾತ್ಮನ ಕಡೆಗೆ ಹೋಗುವುದಿಲ್ಲ.' ಇದೇ ನಿಮ್ಮ ಅಂಜಿಕೆಯಷ್ಟೇ. ಆದರೆ, ನಾವು ಹೇಳುವ ಯುಕ್ತಿಯಿಂದ ಕರ್ಮಗಳನ್ನು ಮಾಡಿದರೆ ಅವು ಕಾಲ್ತೊಡಕುಗಳು ಆಗುವುದೇ ಇಲ್ಲ, ಆ ಯುಕ್ತಿಯು ಯಾವುದೆಂದರೆ ನಾವು ಪದೇ ಪದೇ ಹೇಳಿದಂತೆ ನಿಷ್ಕಾಮ ಬುದ್ಧಿಯಿಂದಲೂ ಈಶ್ವರಾರ್ಪಣ ಬುದ್ಧಿಯಿಂದಲೂ

ಕರ್ಮಮಾಡುತ್ತಿರುವುದು. ಸಾರಾಂಶ, ಕರ್ಮಗಳನ್ನು ಬಿಡುವುದು ಶಕ್ಯವೇ ಇಲ್ಲವೆಂಬುದೇ ಈ ವಿಷಯದಲ್ಲಿ ಗೀತೆಯ ಮೊದಲಿನ ಸಿದ್ಧಾಂತ. ನಿಜವಾಗಿ ಕರ್ಮಗಳು ಬಂಧಕಗಳಲ್ಲ; ಮನಸ್ಸೆ ಬಂಧಕವು. ಆದಕಾರಣ ಮನಸ್ಸನ್ನು ಬಿಗಿ ಹಿಡಿದು ಅಂದರೆ, ಫಲದಲ್ಲಿ ಮನಸ್ಸನ್ನು ಇಡದೆ ಪರಮಾತ್ಮನಲ್ಲಿ ಮನಸ್ಸನ್ನಿಟ್ಟು ಕರ್ಮಮಾಡಬೇಕೆಂಬುದೇ ಗೀತೆಯ ಎರಡನೆಯ ಸಿದ್ಧಾಂತ. ಎಂದರೆ ಕರ್ಮಯೋಗದ ಅಂಗಗಳು ಎರಡು. (೧) ನಿಷ್ಕಾಮತೆ (೨) ಪರಮಾತ್ಮನಲ್ಲಿ ಮನಸ್ಸನ್ನಿಡುವುದು. ನಿಷ್ಕಾಮತೆಯೆಂದರೆನೇ ಸನ್ಯಾಸ ಅಥವಾ ವೈರಾಗ್ಯಬುದ್ಧಿ. ಪರಮಾತ್ಮನಲ್ಲಿ ಮನಸ್ಸಿಡುವುದಕ್ಕೇನೇ ಯೋಗವೆನ್ನುತ್ತಾರೆ. ಪರಮಾತ್ಮನ ವಿಷಯವಾಗಿ ಮಾಡುವ ಕರ್ಮಗಳು ಬಂಧಕವಾಗುವದಿಲ್ಲ. ಅಂಥ ಕರ್ಮಗಳಿಗೆ ಯಜ್ಞವೆಂದು ಹೆಸರು.

**ಉಂಡು ಉಣಸಿದ್ದೆಲ್ಲ ನಿನ್ನ ಯಜ್ಞವೆಂಬರು**

-ಜಗನ್ನಾಥದಾಸರು

ಈ ಯಜ್ಞಕರ್ಮಗಳು ಮಾತ್ರವೇ ಬಂಧಕ ಕರ್ಮಗಳಲ್ಲ. ಮಿಕ್ಕ ಕರ್ಮಗಳು ಬಂಧಕವಾಗುತ್ತವೆ. ಒಟ್ಟಿಗೆ, ಮನುಷ್ಯನು ತಾನು ಮಾಡುವ ಪ್ರತಿಯೊಂದು ಕರ್ಮವು ಪರಮಾತ್ಮನ ಪೂಜೆಯೆಂಬ ಭಾವನೆಯಿಂದ ಮಾಡಬೇಕೆಂಬುದೇ ಕರ್ಮಯೋಗದ ಮುಖ್ಯ ತಿರುಳು.

ಕರ್ಮಗಳನ್ನು ಏಕೆ ಮಾಡಬೇಕೆಂಬುದಕ್ಕೆ ಮತ್ತೊಂದು ಕಾರಣವೆಂದರೆ, ಜಗಚ್ಚಕ್ರವು ನಡೆದಿರುವದೇ ಈ ಕರ್ಮದಿಂದ. ಕರ್ಮವೆಂದರೆ ಸಿಕ್ಕ ಸಿಕ್ಕ ಕರ್ಮವಲ್ಲ. ದೇವತೆಗಳ ಪೂಜೆ ಅಥವಾ ಪರಮಾತ್ಮನ ಪೂಜೆಯೆಂಬ ಭಾವನೆಯಿಂದ ಮಾಡಿದ ಕರ್ಮ; ಅದೇ ಯಜ್ಞ. ಅಂಥ ಯಜ್ಞಗಳನ್ನು ಮಾಡುವುದರಿಂದಲೇ ಮಳೆಬರುತ್ತದೆ. ಮಳೆಯಿಂದ ಆಹಾರದ ಉತ್ಪತ್ತಿ. ಆಹಾರದಿಂದ ಪ್ರಾಣಿಗಳ ಉತ್ಪತ್ತಿ. ಪ್ರಾಣಿಗಳು ವೇದಗಳನ್ನು ತಿಳಿದುಕೊಂಡು ಕರ್ಮಮಾಡಬೇಕು. ಏಕೆಂದರೆ ಆ ವೇದಗಳು ಪರಬ್ರಹ್ಮನನ್ನು ತೋರಿಸಿಕೊಡುತ್ತವೆ. ಹೀಗೆ ಮನುಷ್ಯನು ಕರ್ಮಮಾಡುವುದರಿಂದಲೇ ಈ ಜಗಚ್ಚಕ್ರವು ನಡೆದಿದೆ. ಅಂದಬಳಿಕ ಕರ್ಮಬಿಟ್ಟರೆ ಹೇಗೆ ಸಾಗೀತು? ಈ ಜಗಚ್ಚಕ್ರವನ್ನು ನಡಿಸುವುದಕ್ಕೆ ಎಲ್ಲರೂ ಸಹಾಯಮಾಡಬೇಕೆಂದು ಪರಮಾತ್ಮನ ಸಂಕಲ್ಪ. ಪರಮಾತ್ಮನ ಧ್ಯಾನದಲ್ಲಿ ಮಗ್ನರಾದಾಗ ಮಾತ್ರ ಮಿಕ್ಕ ಕರ್ಮಕ್ಕೆ ಅವಕಾಶವಿರುವುದಿಲ್ಲ. ಆ ಕಾಲಕ್ಕೆ ಮಾತ್ರ ಕರ್ಮವನ್ನು ಬಿಡಬಹುದು. ಮಿಕ್ಕ ಕಾಲದಲ್ಲೆಲ್ಲ ಮನುಷ್ಯನು ಕರ್ಮಮಾಡಲೇಬೇಕು.

ಆತನು ಯಾವ ಕರ್ಮಗಳನ್ನು ಮಾಡಬೇಕು? ಎಂದು ಕೇಳಿದರೆ, ತನಗೆ ನಿಯತವಾದ ಅಂದರೆ ಯೋಗ್ಯವಾದ ಕರ್ಮಗಳನ್ನು ಮಾಡಬೇಕೆಂದು ಗೀತೆಯ ಉತ್ತರ. ತನ್ನ ಮೂಲ ಸ್ವಭಾವಕ್ಕೆ

ಅನುಗುಣವಾದ ಕರ್ಮಗಳನ್ನೇ ಆತನು ಮಾಡಬೇಕು. ಇದಕ್ಕೇನೇ ಸ್ವಧರ್ಮದ ಕರ್ಮಗಳು ಎನ್ನುತ್ತಾರೆ.

**ಬಿಡರು ತಮ್ಮ ಸ್ವಧರ್ಮಗಳೇನು ಬಂದರು |**

-ಜಗನ್ನಾಥದಾಸರು

ಇಂಥ ಸ್ವಾಭಾವಿಕ ಕರ್ಮಗಳಿಗೇನೇ ವರ್ಣಾಶ್ರಮೋಚಿತ ಕರ್ಮಗಳೆನ್ನುತ್ತಾರೆ. ವರ್ಣಗಳು ಮೂಲ ಸ್ವಭಾವವನ್ನು ಅನುಸರಿಸಿರುತ್ತವೆ. ಅವು ಶಾಶ್ವತವಾದವುಗಳು. ಆದಕಾರಣ, ತನ್ನ ವರ್ಣಕ್ಕೆ ಸಲ್ಲದ ಕರ್ಮಗಳನ್ನು ಮಾಡುವುದು ಭಯಾವಹವು.

ಕರ್ಮಗಳನ್ನು ಮಾಡುವುದರಿಂದ ಲೋಕಸಂಗ್ರಹವಾಗುತ್ತದೆಂಬುದೂ ಕರ್ಮಗಳನ್ನು ಏಕೆ ಮಾಡಬೇಕೆಂಬುದಕ್ಕೆ ಮತ್ತೊಂದು ಕಾರಣ.

**ಕರಣಾದಿಗಳು ತಮ್ಮ | ವಿಷಯಂಗಳಲ್ಲಿ ಸಂ | ಚರಿಸಿ ಕೋಟಲೆ |**
**ಗೊಳುತಿಹವಲ್ಲದೆ | ಪರಿಭಾವಿಸಿದೊಡೆ ತಾನ**
**ವಕೆ ಸಾಕ್ಷಿಕನೆಂಬ ವರವಿವೇಕವೆ ಬಂಧರಹಿತ ಸುಜ್ಞಾನಕಾಂಡ**

-ಕೈವಲ್ಯ ಪದ್ಧತಿ

ಜ್ಞಾನಿಗಳು ಕರ್ಮಮಾಡುವುದನ್ನು ನೋಡಿ, ಮಿಕ್ಕವರೂ ಕರ್ಮ ಮಾಡತೊಡಗುತ್ತಾರೆ. ಸ್ವತಃ ಪರಮಾತ್ಮನೇ ಇದಕ್ಕೆ ಉದಾಹರಣೆ. ಪರಮಾತ್ಮನಿಗೆ ಕರ್ಮಮಾಡುವುದರಿಂದ ಪ್ರಯೋಜನವಿಲ್ಲವಷ್ಟೇ. ಆದರೂ ಆತನು ಕರ್ಮಗಳನ್ನು ಮಾಡಿತೋರಿಸಿ ಜಗತ್ತಿಗೆ ಮೇಲ್ ಪಙ್ತಿಯನ್ನು ಹಾಕಿಕೊಟ್ಟಿರುತ್ತಾನೆ. ಮಿಕ್ಕವರು ಕರ್ಮಮಾಡುವುದಕ್ಕೂ ಜ್ಞಾನಿಯಾಗಲಿ ಪರಮಾತ್ಮನಾಗಲಿ ಕರ್ಮಮಾಡುವದಕ್ಕೂ ದೊಡ್ಡ ಭೇದವೇನೆಂದರೆ ಜ್ಞಾನಿಯು ಅಥವಾ ಪರಮಾತ್ಮನು ಅನಾಸಕ್ತನಾಗಿ ಕರ್ಮಮಾಡುತ್ತಾನೆ, ಅಜ್ಞಾನಿಯು ಫಲದಲ್ಲಿ ಆಸಕ್ತಿಯನ್ನಿಟ್ಟು ಕರ್ಮಮಾಡುತ್ತಾನೆ. ಫಲದಲ್ಲಿ ಆಸಕ್ತಿಯನ್ನು ಇಡುವುದರಿಂದ ಆತನು ಬದ್ಧನಾಗುತ್ತಾನೆ. ಜ್ಞಾನಿಯು ಅಥವಾ ಪರಮಾತ್ಮನು ಹಾಗೆ ಬದ್ಧನಾಗುವುದಿಲ್ಲ. ಆಯಾಜನರ ಮೂಲ ಸ್ವಭಾವದ ಮೇರೆಗೇನೇ ಅವರವರಿಂದ ಕರ್ಮಗಳು ಆಗೇ ಆಗುತ್ತವೆ. ಅಜ್ಞಾನಿಯು ತನ್ನ ಮೂಲಸ್ವಭಾವಕ್ಕನುಸರಿಸಿ ಅಂದರೆ ಪ್ರಕೃತಿಗನುಸರಿಸಿ ಆಗುವ ಕರ್ಮಗಳನ್ನು ಮಾಡುವವನು ತಾನು ಎಂದು ತಿಳಿಯುತ್ತಾನೆ. ಜ್ಞಾನಿಯು ಅದಕ್ಕೆ ಕರ್ತನು ತಾನಲ್ಲ, ಪರಮಾತ್ಮನು ಎಂದು ತಿಳಿಯುತ್ತಾನೆ.

ಹೀಗೆ, ಪ್ರತಿಯೊಬ್ಬರು ತಮಗೆ ತಿಳಿದಾಗಲಿ, ತಿಳಿಯದಾಗಲಿ, ತಮ್ಮ ಸ್ವಭಾವಕ್ಕನುಸಾರವಾಗಿಯೇ ಕರ್ಮಮಾಡುತ್ತಿದ್ದ ಬಳಿಕ, ಅವರು ಪಾಪಮಾಡುವುದೇಕೆ, ಎಂದು

ಕೇಳಿದರೆ, ಆ ಮೂಲ ಸ್ವಭಾವವನ್ನು ಹತ್ತಿಕ್ಕಿ ಮನುಷ್ಯರು ಕಾಮವಶರಾಗಿ ಕೆಟ್ಟ ಕರ್ಮಗಳನ್ನು ಮಾಡುತ್ತಾರೆ. ಆದಕಾರಣವೇ ವಚನಕಾರರು

**ಬಿಡಬೇಕು ಬಲು ಹಿಂದೆ ಬರಿದೆ ತನ್ನಿರವನು**
**ಕೆಡಿಸುವ ಕಾಮವಿದನು ಕಂಡ ಯೋಗಿ**

-ವಚನಶಾಸ್ತ್ರ

ಕೋಪವೆಂದರೂ ಇದೇ. ಏಕೆಂದರೆ ಕಾಮದಿಂದಲೇ ಕೋಪವು.

**ಕೋಪವೆಂಬುದು ತನುವಿನಲಿ ನೆರೆ,**
**ಪಾಪ, ಪಾತಕದಿಂದ ನರಕದ,**
**ಕೂಪದಲಿ ಮುಳುಗುವುದು ತಪ್ಪದಿದು ಶಾಸ್ತ್ರಸಿದ್ಧವೆಲೆ**

-ಕನಕದಾಸರು

ಕಾಮವು ಪ್ರಬಲವಾದ ಶತ್ರುವು; ಕರ್ಮವು ಅಲ್ಲ. ಆದಕಾರಣ ಮುಂಚೆ ಕಾಮವನ್ನು ಕೊಲ್ಲಬೇಕು. ಕಾಮವು ಆತನ ಮೂಲ ಸ್ವಭಾವವನ್ನು ಮುಚ್ಚಿರುತ್ತದೆ. ಆದಕಾರಣವೇ, ಮನುಷ್ಯನು ತನ್ನ ಮೂಲ ಸ್ವಭಾವಕ್ಕನುಸಾರವಾಗಿ ಕರ್ಮಮಾಡುವುದನ್ನು ಬಿಟ್ಟು ಕಾಮ ಹೇಳಿದಂತೆ ಕೇಳುತ್ತಾನೆ. ಆತನು ಪಾಪಮಾಡಲಿಕ್ಕೆ ಈ ಕಾಮವೇ ಕಾರಣ. ಆದಕಾರಣ ಮುಂಚೆ ಅದನ್ನು ಕೊಲ್ಲಬೇಕು. ಅದನ್ನು ಕೊಲ್ಲಲಿಕ್ಕೆ ಪರಮಾತ್ಮ ವಿಷಯಕ ಜ್ಞಾನವೇ ಮುಖ್ಯ ಅಸ್ತ್ರವು.

೪ನೆಯ ಪ್ರಕರಣ

(೪ನೆಯ ಅಧ್ಯಾಯದ ತಾತ್ಪರ್ಯ)

# ಅವತಾರಮೀಮಾಂಸೆ - ಕರ್ಮಗಳ ಒಳಭೇದಗಳು

ಈ ನಾಲ್ಕನೆಯ ಅಧ್ಯಾಯದಲ್ಲಿ ಗೀತೆಗೆ ಪ್ರತ್ಯಕ್ಷವಾಗಿ ಸಂಬಂಧಿಸದೆ ಇದ್ದ ಒಂದು ವಿಷಯವು ಬಂದಿದೆ. ಅದಾವುದೆಂದರೆ, ಅವತಾರಮೀಮಾಂಸೆಯು. ಮೂರನೆಯ ಅಧ್ಯಾಯದಲ್ಲಿ ಹೇಳಿದ ಕರ್ಮಯೋಗವು ಹೊಸದಲ್ಲ, ಬಹಳ ಪುರಾತನಕಾಲದಿಂದಲೂ ನಡೆದು ಬಂದದ್ದು; ಅದನ್ನು ತಾನು ಮನುವಿಗೆ, ಮನುವು ಇಕ್ಷ್ವಾಕುವಿಗೆ ಹೀಗೆ ಪರಂಪರೆಯಾಗಿ ಹೇಳುತ್ತ ಬಂದ ಅದೇ ಯೋಗವು ಈಗ ಅರ್ಜುನನಿಗೆ ಹೇಳಲ್ಪಟ್ಟಿದೆಯೆಂದು ಶ್ರೀಕೃಷ್ಣನು ಹೇಳಿದಾಗ "ಕೃಷ್ಣನು ಇಂದಿನವನು, ಮನುವು ಹಿಂದಿನವನು; ಅಂದಬಳಿಕ ಕೃಷ್ಣನು ಅದನ್ನು ಮನುವಿಗೆ ಹೇಳಿದುದು ಹೇಗೆ" ಎಂಬ ಸಂದೇಹವು ಹುಟ್ಟಿತು. ಈ ಸಂದರ್ಭದಲ್ಲಿ ಶ್ರೀಕೃಷ್ಣನು ತನ್ನ ಅವತಾರದ ಮೀಮಾಂಸೆಯನ್ನು ಮಾಡಿರುವನು.

ಪರಮಾತ್ಮನು ಅವತಾರತಾಳುತ್ತಾನೆಂಬ ಕಲ್ಪನೆಯು ಸನಾತನ ಧರ್ಮದ ವಿಶಿಷ್ಟ ಕಲ್ಪನೆಯು. ಈ ಅವತಾರದ ಕಲ್ಪನೆಯನ್ನು ಆಕಲನ ಮಾಡುವುದು ಅತ್ಯಂತ ಕಠಿಣವಾದ ಕೆಲಸವು. ಪರಮಾತ್ಮನು ಅವತಾರ ತಾಳುತ್ತಾನೆಯೆಂದರೆ ಏನು? ಆತನು ಮನುಷ್ಯನಾಗಿ ಹುಟ್ಟುತ್ತಾನೊ? ಆತನು ಮನುಷ್ಯನಾಗಿ ಹುಟ್ಟಿದರೆ, ಆತನಿಗೂ ಮಿಕ್ಕ ಮನುಷ್ಯರಿಗೂ ಭೇದವೇನು? ಆತನಿಗೆ ನಾಲ್ಕು ಕೋಡುಗಳು ಮೂಡಿರುವುದಿಲ್ಲವಷ್ಟೇ. ಅಂದಬಳಕ, ಆತನನ್ನು ಮಿಕ್ಕ ಮನುಷ್ಯರಿಂದ ವಿಂಗಡಿಸುವುದು ಹೇಗೆ? ಆತನ ಅಲೌಕಿಕ ಕೃತ್ಯಗಳಿಂದಲೋ? ಹಾಗೆ ಹೇಳಿದರೆ ಅಲೌಕಿಕ ಪುರುಷರೆಲ್ಲರೂ ಪರಮಾತ್ಮನ ಅವತಾರರೆಂದು ಹೇಳಬೇಕಾಗುತ್ತದೆ. ಆದರೆ ಇಂಥ ಅಲೌಕಿಕ ಪುರುಷರಿಗೆ ಗೀತೆಯು ವಿಭೂತಿಗಳೆಂದು ಕರೆಯುತ್ತದೆ, ಅವತಾರಗಳೆಂದು ಕರೆಯುವುದಿಲ್ಲ. ಅವತಾರಪುರುಷರೆಂದರೆ ಅಲೌಕಿಕ ಪುರುಷರಂತೂ ಸರಿಯೇ; ಅಲ್ಲದೆ, ಅವರಿಗಿಂತ ಕೆಲವು ಹೆಚ್ಚಿನ ಗುಣಗಳು ಇರಬೇಕಾಗುತ್ತವೆ. ಆ ಗುಣಗಳು ಯಾವುವೆಂಬುದನ್ನು ಗೀತೆಯ ಶಬ್ದದಲ್ಲಿ ಹೇಳುವುದಾದಲ್ಲಿ, ಮನುಷ್ಯನಿಗೆ ತನ್ನ ಹಿಂದಿನ ಜನ್ಮಗಳೆಲ್ಲವುಗಳು ಗೊತ್ತಿರುವುದಿಲ್ಲ, ಅವತಾರಪುರುಷನಿಗೆ ಅವೆಲ್ಲವೂ ಗೊತ್ತು ಇರುತ್ತವೆ. ಇದು ಅವತಾರದ ಒಂದು ಲಕ್ಷಣ. ಅವತಾರ ಪುರುಷನಿಗೆ ಜನ್ಮಗಳು ಇರುತ್ತವೆಂದು ಹೇಳಿದ್ದು ಕೇವಲ ಉಪಚಾರ. ನಿಜವಾಗಿ ಮನುಷ್ಯರಿಗೆ ಜನ್ಮಗಳಿದ್ದಂತೆ ಆತನಿಗೆ ಜನ್ಮಗಳಿಲ್ಲ. ಏಕೆಂದರೆ, ಪರಮಾತ್ಮನಿಗೆ ಹುಟ್ಟು ಎಂಬುದು

ಎಲ್ಲಿಂದ ಬರಬೇಕು? ಆತನು ಹುಟ್ಟುವುದೆಂದರೆ ಮನುಷ್ಯನ ಕಣ್ಣಿಗೆ ಹುಟ್ಟಿದವನಂತೆ ಕಾಣುವುದು. ಜ್ಞಾನಿಗಳಿಗೆ ಮಾತ್ರ ಆತನು ಹುಟ್ಟುವುದಿಲ್ಲವೆಂಬುದು ಗೊತ್ತಿರುತ್ತದೆ. ಹಾಗಾದರೆ ರಾಮಕೃಷ್ಣಾದಿಗಳು ಮನುಷ್ಯ ಶರೀರಗಳನ್ನು ತಾಳಿದ್ದೇನು ಸುಳ್ಳೋ, ಎಂದು ಕೇಳಿದರೆ ಅವರ ಶರೀರಗಳು ಅಜ್ಞರಿಗೆ ಮನುಷ್ಯ ಶರೀರಗಳಂತೆ ಕಂಡದ್ದೇನೂ ಸುಳ್ಳಲ್ಲ. ಆದರೆ ಜ್ಞಾನಿಗಳಿಗೆ ಮಾತ್ರ ಅವರ ಶರೀರಗಳು ಮನುಷ್ಯ ಶರೀರಗಳಂತೆ ಕಾಣುವುದಿಲ್ಲ. ಆ ಮನುಷ್ಯ ಶರೀರದಂತೆ ಕಾಣುವ ಶರೀರಗಳು ನಿಮಿತ್ತ ಮಾತ್ರಗಳು. ವಸ್ತುತಃ ಆ ಶರೀರಕ್ಕೂ ಪರಮಾತ್ಮನಿಗೂ ಏನೂ ಸಂಬಂಧವೇ ಇರುವುದಿಲ್ಲ. ಆ ಶರೀರಗಳಲ್ಲಿ ಆತನು ಅಭಿವ್ಯಕ್ತನಾಗುತ್ತಾನೆ ಮಾತ್ರ. ಪೂರ್ವದಲ್ಲಿ ಸೂರ್ಯ ಚಂದ್ರರು ಮೂಡಿದರೆಂದೆನ್ನುತ್ತೇವೆ. ಹಾಗೆ ಹೇಳಿದ ಮಾತ್ರದಿಂದ ಅವರು ನಿಜವಾಗಿ ಹುಟ್ಟುತ್ತಾರೋ? ಇಲ್ಲ; ಅವರು ಸದಾ ಇರುತ್ತಾರೆ. ಕೆಲವೊಂದು ಕಾರಣದ ಮೂಲಕ ಅವರು ಅಲ್ಲಿ ಅಭಿವ್ಯಕ್ತರಾಗುತ್ತಾರೆ. ಹಾಗೆಯೇ ಅವತಾರಪುರುಷನ ಸ್ಥಿತಿ, ಕೆಲಕೆಲವು ಕಾಲದಲ್ಲಿ, ಪರಮಾತ್ಮನು ಹಾಗೆ ಅಭಿವ್ಯಕ್ತನಾಗುತ್ತಾನೆ. ಆ ಅಭಿವ್ಯಕ್ತಿಯಾಗುವುದಕ್ಕೇನೇ ನಾವು ಅವತಾರವೆಂದು ಕರೆಯುತ್ತೇವೆ. ಪರಮಾತ್ಮನು ಅವಲಂಬಿಸುವ ಈ ದೇಹವು ಭೌತಿಕ ದೇಹವೋ ಅಥವಾ ಆಧ್ಯಾತ್ಮಿಕ ದೇಹವೋ ಎಂಬ ಬಗ್ಗೆ ಸೂಕ್ಷ್ಮವಾದ ಮತಭೇದವಿದೆ. ಪರಮಾತ್ಮನು ಧರಿಸುವ ಈ ದೇಹಗಳು ಪಾಂಚಭೌತಿಕ ಶರೀರಗಳೆಂದೂ-ಆದರೆ ಅವು ನಮ್ಮ ನಿಮ್ಮ ಶರೀರಗಳಂತೆ ಸ್ಥೂಲದ್ರವ್ಯಗಳಿಂದ ಮಾಡಲ್ಪಟ್ಟವುಗಳಿರದೆ, ಅತ್ಯಂತ ಸೂಕ್ಷ್ಮವಾದ ದ್ರವ್ಯಗಳಿಂದ ರಚಿತವಾಗಿರುತ್ತದೆಂದೂ ಶ್ರೀ ಶಂಕರಾಚಾರ್ಯರ ಅಭಿಪ್ರಾಯ. ಅವು ಭೌತಿಕ ಶರೀರಗಳೇ ಅಲ್ಲ, ಆಧ್ಯಾತ್ಮಿಕ ಶರೀರಗಳೆಂದೂ ಅವು ಅವತಾರಪುರುಷರು ಹುಟ್ಟುವಾಗ ಹುಟ್ಟಿ, ಅವರ ಅವತಾರ ಮುಗಿದ ಕೂಡಲೆ ಇಲ್ಲವಾಗುತ್ತವೆಂದೂ ರಾಮಾನುಜಾಚಾರ್ಯರ ಮತ. ಅವು ಆಧ್ಯಾತ್ಮಿಕ ಶರೀರಗಳಂತೂ ಸರಿಯೇ, ಅಲ್ಲದೆ, ಅವು ಶಾಶ್ವತ ಶರೀರಗಳು, ಎಂದು ಅಂದರೆ, ಅವು ಅವರೊಡನೆ ಹುಟ್ಟಿ ಅವರೊಡನೆ ಇಲ್ಲವಾಗುವುದಿಲ್ಲವೆಂದು ಮಧ್ವಾಚಾರ್ಯರ ಮತ. ಆದರೆ ಒಂದು ವಿಷಯದಲ್ಲಿ, ಮೂವರಲ್ಲಿಯೂ ಮತೈಕ್ಯವಿದೆ. ಅದಾವುದೆಂದರೆ, ಪರಮಾತ್ಮನ ಅವತಾರಗಳೆಂದರೆ ಲೋಕವಿಲಕ್ಷಣವಾದವುಗಳು ಎಂಬುದು. ಒಂದು ಲೌಕಿಕ ಉದಾಹರಣೆಯಿಂದ ಅವತಾರ ರಹಸ್ಯದ ಕಿಂಚಿತ್ ಕಲ್ಪನೆ ಬರಬಹುದು. ನಾವು ಬೆಳಕಂಡಿಯೊಳಗಿಂದ ನೋಡಿದರೆ ನಮಗೆ ಭವ್ಯವಾದ ಆಕಾಶವು ಕಾಣುವುದಷ್ಟೆ, ಹಾಗೆ, ರಾಮಕೃಷ್ಣಾದಿ ಭವ್ಯ ಅವತಾರಗಳು ಅವರ ಮನುಷ್ಯ ಶರೀರದಂತೆ ಕಾಣುವ ಶರೀರಗಳೊಳಗಿಂದ ಕಾಣುತ್ತವೆ. ಆ ಬೆಳಕಿಂಡಿಯು ಹೇಗೆ ಆ ಭವ್ಯವಾದ ಆಕಾಶವಲ್ಲವೋ ಹಾಗೆ ಆ ಶರೀರಗಳಿಗೂ ಅವರ ಅವತಾರಕ್ಕೂ ಸಂಬಂಧವೇ ಇಲ್ಲ. ಆ ಬೆಳಕಿಂಡಿಯು ಭೌತಿಕವೊ ಹೇಗೆ ಎಂಬ ಬಗ್ಗೆ

ಮತಭೇದವಿದೆ. ಆದರೆ ಇದು ಗಹನ ವಿಷಯವಿರುವುದರಿಂದ ಇಲ್ಲಿ ನಾವು ಆ ಚರ್ಚೆಯಲ್ಲಿ ಪ್ರವೇಶಿಸುವುದಿಲ್ಲ. ಇದಾಯಿತು ಅವತಾರದ ಸ್ವರೂಪದ ವಿಚಾರ.

ಇನ್ನು ಅವತಾರದ ಉದ್ದೇಶವೇನು ನೋಡುವ. ಗೀತೆಯಲ್ಲಿ ಅವತಾರದ ಉದ್ದೇಶಗಳು (೧) ಸಾಧುಗಳ ಪರಿತ್ರಾಣ (೨) ದುಷ್ಟರ ವಿನಾಶ (೩) ಮತ್ತು ಧರ್ಮಸಂಸ್ಥಾಪನೆಗಳೆಂದು ಹೇಳಿದೆ.

**ಶರಣರಿಗೆ ವಜ್ರಪಂಜರನೊ ದುಷ್ಟ**
**ದುರುಳ ದೈತ್ಯರಿಗೆ ಝುರ್ಝುರನೋ**
**ದುರಿತ ಕದಳಿಗೆ ಕುಂಜರನೋ**

-ವಿಜಯದಾಸರು

ಎಂಬುದಾಗಿ ವಿಜಯದಾಸರು ವರ್ಣಿಸಿರುವರು. ಆದರೆ, ಇವು ಮೂರೇ ಉದ್ದೇಶಗಳೆಂದು ತಿಳಿಯಬಾರದು. ಅವು ಅನೇಕವಾಗಿವೆ.

ಒಟ್ಟಿಗೆ ಹೇಳುವುದೇನೆಂದರೆ, ಪರಮಾತ್ಮನ ಅವತಾರಕ್ಕೂ ಜೀವನ ಅವತಾರಕ್ಕೂ ಬಹಳ ಭೇದವಿದೆ. ಜೀವರುಗಳ ದೇಹಗಳಲ್ಲಿಯೂ ಪರಮಾತ್ಮನು ಇರುವನು. ರಾಮಕೃಷ್ಣಾದಿಗಳ ದೇಹಗಳಲ್ಲಿಯೂ ಪರಮಾತ್ಮನು ಇರುವನು. ಆದರೆ, ರಾಮಕೃಷ್ಣಾದಿಗಳಿಗೆ ಮಾತ್ರ ನಾವು ಅವತಾರಪುರುಷರೆನ್ನುತ್ತೇವೆ. ಮಿಕ್ಕ ಮಾನವರಿಗೆ ಅವತಾರ ಪುರುಷರೆನ್ನುವುದಿಲ್ಲ. ಜೀವರಿಗೂ ಅವತಾರಪುರುಷರಿಗೂ ಇರುವ ಭೇದವನ್ನು ನಾವು ಹೀಗೆ ಹೇಳಬಹುದು. ಪರಮಾತ್ಮನು ಹುಟ್ಟಿಲ್ಲದವನೂ ಅವ್ಯಯವಾದ ಶರೀರವುಳ್ಳವನೂ ಪ್ರಾಣಿಗಳ ಒಡೆಯನೂ ಆಗಿದ್ದರೂ ಕೂಡ, ತನ್ನ ಇಚ್ಛೆಯಿಂದ ತನ್ನ ಅಧೀನವಾದ ಪ್ರಕೃತಿಯನ್ನು ಅಧಿಷ್ಠಾನಮಾಡಿಕೊಂಡು ಹುಟ್ಟಿದವನಂತೆ ತೋರುತ್ತಾನೆ. ಸಾಮಾನ್ಯ ಜೀವರಲ್ಲಿ ನಾವು ಮೂರುತರಹದ ನ್ಯೂನತೆಗಳನ್ನು ಕಾಣಬಹುದು. ಅವು ಯಾವುವೆಂದರೆ: (೧) ದೇಹಹಾನಿ (೨) ದುಃಖಪ್ರಾಪ್ತಿ (೩) ಅಪೂರ್ಣತೆ. ಈ ಮೂರೂ ನ್ಯೂನತೆಗಳು ಪರಮಾತ್ಮನ ಅವತಾರದಲ್ಲಿ ಇರುವುದಿಲ್ಲ. ರಾಮಕೃಷ್ಣಾದಿ ಅವತಾರಗಳಲ್ಲಿ ರಾಮನು ಸೀತೆಗೋಸ್ಕರ ಶೋಕಿಸುವುದೇ ಮುಂತಾದವುಗಳು ಕಾಣಲಿಕ್ಕೆ ಮಾತ್ರ ಶೋಕಗಳು ಎಂದು ನಮ್ಮವರ ಅಭಿಪ್ರಾಯ. ಅದೂ ಕಠಿಣ ವಿಷಯವಿದ್ದುದರಿಂದ ಇಲ್ಲಿ ಅದನ್ನು ಹೇಳಿರುವುದಿಲ್ಲ. ಮುಖ್ಯವಾಗಿ ತಿಳಿಯತಕ್ಕದ್ದೇನೆಂದರೆ ಅವತಾರಪುರುಷರೆಂದರೆ ಅಲೌಕಿಕ ಪುರುಷರಲ್ಲ, ಅತಿಮಾನುಷ ( Super-men ) ರೂ ಅಲ್ಲವೆಂಬುದು.

೪ನೆಯ ಅಧ್ಯಾಯದಲ್ಲಿ ಬಂದಿರುವ ಮುಂದಿನ ವಿಷಯವೆಂದರೆ ಚಾತುರ್ವಣ್ಯ್ರಗಳ ವಿಚಾರ. ಜಗತ್ತಿನಲ್ಲಿ ವರ್ಣಗಳು ನಾಲ್ಕು (೧) ಬ್ರಹ್ಮ (೨) ಕ್ಷತ್ರಿಯ (೩) ವೈಶ್ಯ (೪) ಶೂದ್ರ, ಅವರವರ ಗುಣ ಕರ್ಮಗಳಿಗನುಸಾರವಾಗಿ ಈ ನಾಲ್ಕು ವರ್ಣಗಳಿರುತ್ತವೆ. ವರ್ಣಗಳಿಗೆ ಮೂಲಾಧಾರವು

ಜನ್ಮವಲ್ಲ, ಈ ಗುಣಕರ್ಮಗಳೆಂಬುದು ಖಂಡಿತ. ಆದರೆ, ಗುಣಕರ್ಮಗಳೆಂದರೆ ಆಧುನಿಕರು ತಿಳಿಯುವ ಗುಣಕರ್ಮಗಳಲ್ಲ. ಗುಣಗಳಿಂದ ಸಾತ್ವಿಕ ರಾಜಸ ತಾಮಸ ಗುಣಗಳನ್ನು ತೆಗೆದುಕೊಳ್ಳಬೇಕು. ಕರ್ಮಗಳಿಂದ ಶಮದಮಾದಿಗಳನ್ನು ತೆಗೆದುಕೊಳ್ಳಬೇಕು. ಹಿಂದುಸ್ಥಾನದಲ್ಲಿ ಈ ಗುಣಕರ್ಮಗಳ ಆಧಾರದಿಂದ ರಚಿಸಲ್ಪಟ್ಟ ವರ್ಣವ್ಯವಸ್ಥೆಗೆ ಜನ್ಮದಿಂದ ಒಂದುಬಗೆಯ ಸ್ಥಿರಸ್ವರೂಪವು ಪ್ರಾಪ್ತವಾಗಿರುತ್ತದೆ. ಮನುಷ್ಯನ ಮೂಲ ಗುಣಕರ್ಮಗಳನ್ನು ತಿಳಿಯುವುದಕ್ಕೆ ಜನ್ಮವು ಒಂದು ಸ್ಥೂಲವಾದ ಅಳತೆಗೋಲು. ಅದಕ್ಕಿಂತ ಸೂಕ್ಷ್ಮವಾದ ಅಳತೆಗೋಲು ಸಿಕ್ಕುವುದಿಲ್ಲ. ಆದಕಾರಣ, ಆ ಅಳತೆಗೋಲನ್ನು ಸ್ವೀಕರಿಸದೆ ಗತ್ಯಂತರವಿಲ್ಲ. ಆದರೆ ಅದೇ ಸರ್ವಸ್ವವೆಂದು ತಿಳಿದರೆ ಮಾತ್ರ ಅದು ತಪ್ಪಾಗುವುದು. ಈ ತತ್ವಗಳನ್ನು ನೆನಪಿನಲ್ಲಿ ಇಟ್ಟರೆ, ಆಧುನಿಕರು ಈ ಶ್ಲೋಕದ ಆಧಾರದಮೇಲೆ ಮನಬಂದಂತೆ ಕುಣಿಯುವುದೂ ಸರಿಯಲ್ಲವೆಂಬುದೂ ಪುರಾಣಮತವಾದಿಗಳು ಜನ್ಮಕ್ಕೊಂದಕ್ಕೇನೇ ಅಂಟಿಕೊಂಡು ಹಾರಾಡುವುದೂ ಸರಿಯಲ್ಲವೆಂಬುದೂ ಗೊತ್ತಾಗುವುದು.

ಳನೆಯ ಅಧ್ಯಾಯದಲ್ಲಿ ಬಂದಿರುವ ಮುಂದಿನ ಮುಖ್ಯವಿಷಯವೆಂದರೆ ಕರ್ಮದೊಳಗಿನ ಭೇದಗಳು. ಕರ್ಮವೆಂಬ ಶಬ್ದಕ್ಕೆ ಇಲ್ಲಿ ವಿಶಿಷ್ಟ ಅರ್ಥವಿದೆ. ಆ ಪಾರಿಭಾಷಿಕ ಅರ್ಥವನ್ನು ನಾವು ಮುಂಚೆ ಅರಿತುಕೊಳ್ಳಬೇಕು. ಯಾವತ್ತು ತರಹದ ಕರ್ಮಗಳಿಗೆ ಕರ್ಮವೆಂದು ಗೀತೆಯು ಅನ್ನುವುದಿಲ್ಲ. ಇಲ್ಲಿ ನಿವೃತ್ತ ಕರ್ಮಕ್ಕೆ ಮಾತ್ರವೇ ಕರ್ಮವೆನ್ನುತ್ತದೆ. ಮಿಕ್ಕ ಕರ್ಮಗಳು ಕರ್ಮಗಳೇ ಅಲ್ಲ. ನಿವೃತ್ತ ಕರ್ಮಗಳೆಂದರೆ ಕರ್ತೃತ್ವಾಭಿಮಾನವನ್ನೂ ಕಾಮಾದಿಗಳನ್ನೂ ಬಿಟ್ಟು ಮಾಡುವ ಕರ್ಮಗಳು. ಸಾಮಾನ್ಯ ಭಾಷೆಯಲ್ಲಿ ಹೇಳುವುದಾದಲ್ಲಿ, ನಿಷ್ಕಾಮ ಕರ್ಮಗಳಿಗೆ ಮಾತ್ರ ಕರ್ಮಗಳೆನ್ನಬೇಕು. ಮಿಕ್ಕವುಗಳಲ್ಲಿ ಕೆಲವು ಅಕರ್ಮಗಳಾಗಿರಬಹುದು, ಕೆಲವು ವಿಕರ್ಮಗಳಾಗಿರಬಹುದು. ಅವುಗಳಿಗೆ ಬೆಲೆ ಇಲ್ಲ. ನಿವೃತ್ತಕರ್ಮದಲ್ಲಿ ಕಾಮಸಂಕಲ್ಪಗಳಿರುವುದಿಲ್ಲ. ಕರ್ಮಫಲದಲ್ಲಿ ಆಸಕ್ತಿ ಇರುವುದಿಲ್ಲ. ಹೀಗೆ ಕಾಮಾದಿಗಳ ಪರಿತ್ಯಾಗ ಮಾಡುವುದಕ್ಕೆ ಮನೋನಿಗ್ರಹವೇ ಮುಖ್ಯ ಉಪಾಯವು. ಹೀಗೆ ಮನೋನಿಗ್ರಹ ಮಾಡಿದವನ ಮುಖ್ಯ ಲಕ್ಷಣವೆಂದರೆ ಆತನು ಸುಖ ದುಃಖಾದಿಗಳನ್ನು ಸಮನಾಗಿ ಗಣಿಸಿ, ಇದ್ದದ್ದರಲ್ಲಿ ಸಂತುಷ್ಟನಾಗಿರುತ್ತಾನೆ. ಒಟ್ಟಿಗೆ, ನಿವೃತ್ತ ಕರ್ಮವೆಂದರೆ ಫಲಾಸಕ್ತಿಯನ್ನು ಬಿಟ್ಟು, ದೇಹಾದಿಗಳ ಅಭಿಮಾನವನ್ನು ತೊರೆದು, ಪರಮಾತ್ಮನ ಜ್ಞಾನದಲ್ಲಿ ಮನಸ್ಸಿಟ್ಟು, ಪರಮಾತ್ಮನ ಪೂಜೆಯೆಂದು ಕರ್ಮಮಾಡುವುದು. ಸಾರಾಂಶ, ಕರ್ಮದಲ್ಲಿ ಇಷ್ಟೆಲ್ಲ ಅರ್ಥವು ಅಡಕವಾಗಿದೆ. ಪರಮಾತ್ಮನ ಜ್ಞಾನದಲ್ಲಿ ಮನಸ್ಸಿಡುವುದೆಂದರೆ ತಾನು ಯಜನಮಾಡುವ ಹೋಮ ದ್ರವ್ಯಗಳೇ ಮುಂತಾದವುಗಳೆಲ್ಲವೂ ಪರಮಾತ್ಮನ ಅಧೀನವೆಂದು ತಿಳಿಯುವುದು. ಈ ನಿವೃತ್ತ ಕರ್ಮಕ್ಕೇನೇ

ಯಜ್ಞವೆಂದೂ ಅನ್ನುತ್ತಾರೆ. ಏಕೆಂದರೆ ಇದರಲ್ಲಿಯೂ ಒಂದೊಂದು ವಿಧದ ಅಗ್ನಿಯಲ್ಲಿ ಒಂದೊಂದು ವಿಧದ ದ್ರವ್ಯವನ್ನು ಹೋಮಮಾಡಬೇಕಾಗುತ್ತದೆ.

ಇಂಥ ನಿವೃತ್ತ ಕರ್ಮಗಳು ಅಥವಾಯಜ್ಞಗಳು ಸಾಮಾನ್ಯವಾಗಿ ಹನ್ನೆರಡು ಅಥವಾ ಹದಿಮೂರು ಪ್ರಕಾರದವಿರುತ್ತವೆ. ಅವು ಯಾವುವೆಂದರೆ (೧) ಉಪಾಸನಾಯಜ್ಞ. ದೇವರ ಉಪಾಸನೆ ಮಾಡುವುದೇ ಒಂದು ಯಜ್ಞವೆಂದು ತಿಳಿಯುವವರು ಇವರು ಇದಕ್ಕೆ, ಸಂನ್ಯಾಸಿಗಳು, ವಿಶೇಷತಃ ಪರಮಹಂಸರು ಅಧಿಕಾರಿಗಳು. (೨) ಅಗ್ನಿಹೋತ್ರಾದಿ ಯಜ್ಞ. ಗೃಹಿಗಳು ಇದಕ್ಕೆ ಅಧಿಕಾರಿಗಳು. ಅವರು ವಿಷ್ಣುವಿನಗೋಸ್ಕರ ಈ ಅಗ್ನಿ ಹೋತ್ರಾದಿಗಳನ್ನು ಮಾಡುತ್ತಾರೆ. (೩) ಇಂದ್ರಿಯ ನಿಯಮನ ಯಜ್ಞ. ಈ ಯಜ್ಞದಲ್ಲಿ ಸಂಯಮನವೆಂಬ ಅಗ್ನಿಯಲ್ಲಿ ಶ್ರೋತ್ರಾದಿ ಕರ್ಮೇಂದ್ರಿಯಗಳನ್ನು ಹೋಮಮಾಡುತ್ತಾರೆ. ಅಂದರೆ, ಕರ್ಮೇಂದ್ರಿಯಗಳನ್ನು ಪ್ರತ್ಯಾಹಾರಮೂಲಕವಾಗಿ ಸಂಯಮನ ಮಾಡುತ್ತಾರೆ. ಇವರು ಇಂದ್ರಿಯಗಳನ್ನು ಬಿಗಿಹಿಡಿದು ವಿಷಯಗಳನ್ನು ಅನುಭವಿಸುವುದನ್ನೇ ನಿಲ್ಲಿಸಿಬಿಡುತ್ತಾರೆ. (೪) ವಿಷಯನಿಯಮನ ಯಜ್ಞ. ಇದರಲ್ಲಿ, ವಿಷಯಗಳನ್ನು ಅನುಭವಿಸುತ್ತಾರೆ; ಆದರೆ ಮಿತಿಯಿಂದ ಅನುಭವಿಸುತ್ತಾರೆ. ಇವರು ಜ್ಞಾನೇಂದ್ರಿಯಗಳಲ್ಲಿ ವಿಷಯಗಳನ್ನು ಹೋಮಿಸುತ್ತಾರೆ. ಅಂದರೆ ಜ್ಞಾನಪೂರ್ವಕವಾಗಿ ಮಿತಿಯಿಂದ ವಿಷಯಗಳನ್ನು ಅನುಭಸುವವರು ಇವರು. (೫) ಮನಃಸಂಯಮನ ಯಜ್ಞ. ಈ ಯಜ್ಞದಲ್ಲಿ, ಕರ್ಮೇಂದ್ರಿಯಗಳ ವ್ಯಾಪಾರಗಳನ್ನೂ ಪ್ರಾಣಕರ್ಮಗಳನ್ನೂ ಆತ್ಮಸಂಯಮಯೋಗ ಅಂದರೆ ಮನಃ ಸಂಯಮನಯೋಗವೆಂಬ ಅಗ್ನಿಯಲ್ಲಿ ಆಹುತಿಕೊಡುತ್ತಾರೆ. ಅಂದರೆ, ಇವರು ಮನಸ್ಸಿನಿಂದ ಸರ್ವಕರ್ಮೇಂದ್ರಿಯಗಳ ಮತ್ತು ಪ್ರಾಣಗಳ ವ್ಯಾಪಾರಗಳನ್ನು ತಡೆದು ನಿಲ್ಲಿಸುತ್ತಾರೆ. (೬) ದ್ರವ್ಯಯಜ್ಞ. ಇದರಲ್ಲಿ, ದ್ರವ್ಯದಾನಮಾಡುವುದು, ಅನ್ನಛತ್ರಾದಿಗಳನ್ನು ಕಟ್ಟಿಸುವುದು ಇವೇ ಮುಂತಾದವುಗಳು ಸೇರುತ್ತವೆ. (೭) ತಪೋಯಜ್ಞ. ಇದರಲ್ಲಿ ಶಾರೀರಿಕ ಮಾನಸಿಕ ಮತ್ತು ವಾಙ್ಮಯಾತ್ಮಕ ತಪಸ್ಸುಗಳು ಸೇರುತ್ತವೆ. ದೇವದ್ವಿಜಗುರುಗಳ ಸೇವೆ, ಸ್ನಾನ, ಅಹಿಂಸೆ ಇವೇ ಮುಂತಾದವುಗಳು ಶಾರೀರಿಕ ತಪಸ್ಸುಗಳು, ಸತ್ಯಮಾತಾಡುವುದು ಮುಂತಾದವುಗಳು ವಾಙ್ಮಯ ತಪಸ್ಸುಗಳು, ಮನಃಶುದ್ಧತೆ ಮುಂತಾದವುಗಳು ಮಾನಸಿಕ ತಪಸ್ಸುಗಳು, (೮) ಯೋಗಯಜ್ಞ. ಇದರಲ್ಲಿ ನಿಷ್ಕಾಮ ಕರ್ಮಯೋಗ, ಧ್ಯಾನಯೋಗ ಮುಂತಾದವುಗಳು ಬರುತ್ತವೆ. ಇವೂ ಯಜ್ಞಗಳೇ. (೯) ಸ್ವಾಧ್ಯಾಯಯಜ್ಞ. ಅಧ್ಯಯನ ಮಾಡುವುದೂ ಒಂದು ಯಜ್ಞವೇ. (೧೦) ಜ್ಞಾನಯಜ್ಞ. ಅಧ್ಯಾಪನಮಾಡುವುದೂ ಒಂದು ಯಜ್ಞವು. (೧೧) ಪ್ರಾಣಾಯಾಮಯಜ್ಞ. ಪ್ರಾಣಾಯಾಮವನ್ನು ಮಾಡುವುದೂ ಒಂದು ಯಜ್ಞವು. (೧೨) ನಿಯತಾಹಾರಯಜ್ಞ. ಅಂದರೆ ಉಪವಾಸಾದಿಗಳನ್ನು ಮಾಡುವುದು. ಇಂಥವರು ಇಂದ್ರಿಯ ವ್ಯಾಪಾರಗಳನ್ನು ಇಂದ್ರಿಯಗಳಲ್ಲಿ

ಆಹುತಿಕೊಡುತ್ತಾರೆ. ಅಂದರೆ ಯಾವತ್ತು ಇಂದ್ರಿಯ ವ್ಯಾಪಾರಗಳನ್ನು ಬಿಗಿಹಿಡಿಯುತ್ತಾರೆ. ಹಿಂದೆ ಹೇಳಿದ ಇಂದ್ರಿಯ ನಿಯಮನದಲ್ಲಿ ಪ್ರತ್ಯಾಹಾರವಿರುತ್ತದೆ. ಅಂದರೆ ಮನಸ್ಸಿನಿಂದ ಇಂದ್ರಿಯನಿಗ್ರಹವಿರುತ್ತದೆ. ಇದರಲ್ಲಿ ಉಪವಾಸಾದಿಗಳ ಮೂಲಕ ನಿಯಮನವಿರುತ್ತದೆ. ಅಥವಾ ಉಪವಾಸಾದಿ ಯಜ್ಞವೇ ಬೇರೆ ಮತ್ತು (೧೩) ಈ ಇಂದ್ರಿಯಗಳ ಶಕ್ತಿಯನ್ನು ಕ್ಷೀಣಮಾಡುವ ಯಜ್ಞವೇ ಬೇರೆ ಎಂದೂ ತಿಳಿಯಬಹುದು. ಹೀಗೆ ಯಜ್ಞಗಳಲ್ಲಿ ೧೨-೧೩ ಪ್ರಕಾರಗಳಿರುತ್ತವೆ. ಇವೆಲ್ಲ ತರಹದ ಯಜ್ಞಗಳ ಮೂಲಕ ಮನುಷ್ಯನ ಪಾಪ ಪರಿಹಾರವಾಗುತ್ತದೆ. ಈ ಪ್ರಕಾರವಾಗಿ ಯಜ್ಞಮಾಡಿ ಉಳಿದುದಕ್ಕೆ ಅಮೃತವೆಂದು ಹೆಸರು. ಅದನ್ನು ಉಣ್ಣುವವರು ಬ್ರಹ್ಮನನ್ನು ಹೊಂದುತ್ತಾರೆ. ಯಜ್ಞಮಾಡದಿದ್ದವರಿಗೆ ಇಹಲೋಕವೂ ಇಲ್ಲ, ಪರಲೋಕವೂ ಇಲ್ಲ. ಇವೆಲ್ಲ ಯಜ್ಞಗಳನ್ನು ಭೋಗಿಸುವವನು ಪರಮಾತ್ಮನು. ಇವೆಲ್ಲವುಗಳಿಗೂ ಕರ್ಮವೇ ಮೂಲ. ಆದರೆ ಇವೆಲ್ಲ ಯಜ್ಞಗಳಲ್ಲಿ ದ್ರವ್ಯಮಯ ಯಜ್ಞಗಳಿಗಿಂತ ಜ್ಞಾನಯಜ್ಞಗಳೇ ಹೆಚ್ಚಿನವು. ಏಕೆಂದರೆ, ಯಾವತ್ತು ಯಜ್ಞಗಳ ಪರ್ಯವಸಾನವು ಜ್ಞಾನದಲ್ಲಿ ಆಗುತ್ತದೆ. ಜ್ಞಾನವೆಂದರೆ ಅರಿವು, ಅದಕ್ಕಿಂತ ಪವಿತ್ರವಾದ ವಸ್ತು ಬೇರೊಂದಿಲ್ಲ.

**ಅರುವಿಂಗೆ ಹಿರಿದುಕಿರಿದುಂಟೇ**

-ವಚನಶಾಸ್ತ್ರ

ಅಂದರೆ ಪರಮಾತ್ಮನ ಜ್ಞಾನವೇ ಇವೆಲ್ಲವುಗಳ ಧ್ಯೇಯವು. ಜ್ಞಾನವನ್ನುಗಳಿಸುವುದಕ್ಕೆ ಗುರುಗಳಿಗೆ ಶರಣುಹೋಗಬೇಕು.

**ಗುರುಚರಣವ ಹಿಡಿ ಹಿಡಿ**

-ಪುರಂದರದಾಸರು

ಅಂಥ ಜ್ಞಾನವನ್ನು ಸಂಪಾದಿಸಿದರೆ ಮನುಷ್ಯನು ಸಹಜವಾಗಿ ಸಂಸಾರವನ್ನು ದಾಟಬಲ್ಲನು. ಜ್ಞಾನಕ್ಕಿಂತ ಪವಿತ್ರವಾದ ವಸ್ತು ಬೇರೊಂದಿಲ್ಲ. ಆ ಜ್ಞಾನವನ್ನು ಸಂಪಾದಿಸಬೇಕಾದರೆ ಮನುಷ್ಯನು ಶ್ರದ್ಧೆಯನ್ನಿಡಬೇಕು. ಮತ್ತು ಸಂಯತೇಂದ್ರಿಯನಾಗಿ ಅಂದರೆ ಇಂದ್ರಿಯಗಳನ್ನು ವಶಮಾಡಿಕೊಂಡು ಪರಮಾತ್ಮನೇ ಸರ್ವೋತ್ತಮನೆಂದು ತಿಳಿಯಬೇಕು. ಅಜ್ಞಾನಿಯೂ ಶ್ರದ್ಧೆಯಿಲ್ಲದವನೂ ಸಂಶಯಮನಸ್ಕನಾಗಿ ಹಾಳಾಗುತ್ತಾನೆ. ಆದಕಾರಣ, ಮನುಷ್ಯನು ಜ್ಞಾನವನ್ನು ಗಳಿಸಿ ಮುಕ್ತಿಯನ್ನು ಪಡೆಯಬೇಕು.

೧೦ನೆಯ ಪ್ರಕರಣ

( ೫ನೆಯ ಅಧ್ಯಾಯದ ತಾತ್ಪರ್ಯ )

# ಸಂನ್ಯಾಸವೂ ಯೋಗವೂ

ಇಲ್ಲಿಯವರೆಗೆ ನಾವು ವಿವರಿಸಿದ ವಿಷಯಗಳನ್ನು ಇಲ್ಲಿ ಸಂಕ್ಷೇಪವಾಗಿ ಹೇಳುವೆವು. ಮನುಷ್ಯನ ಮುಖ್ಯ ಧ್ಯೇಯವು ಮೋಕ್ಷ, ಸ್ವರ್ಗಮಾತ್ರವಲ್ಲ. ಆ ಮೋಕ್ಷಕ್ಕೆ ಸಾಧನವು ಪರಮಾತ್ಮ ಜ್ಞಾನ, ಕರ್ಮಯೋಗವು ಆ ಜ್ಞಾನಕ್ಕೆ ಒಂದು ಸಾಧನ. ಆ ಕರ್ಮಯೋಗದಲ್ಲಿ ಎರಡು ಅಂಶಗಳು (೧) ಕಾಮಾದಿವರ್ಜನರೂಪ ಸಂನ್ಯಾಸ (೨) ಈಶ್ವರಾರ್ಪಣಬುದ್ಧಿಯಿಂದ ಕರ್ಮಾನುಷ್ಠಾನ. ಮೊಗ್ಗೆಯ ಒಂದೊಂದೇ ಪಕಳಿಯನ್ನು ತೆರೆಯುತ್ತ ಹೋಗುವುದು ಗೀತೆಯ ಸಂಪ್ರದಾಯ. ಆ ಮೇರೆಗೆ ಮುಂಚೆ ಅದು ಸಂನ್ಯಾಸವನ್ನೇ ಹೆಚ್ಚಿಗೆ ವಿವರಿಸುತ್ತದೆ. ನಡುವೆ ಎಲ್ಲಿಯಾದರೊಮ್ಮೆ ಯೋಗವನ್ನು ಒಂದೆರಡು ಶಬ್ದಗಳಲ್ಲಿ ಸೂಚಿಸಿರುತ್ತದೆ. ಉದಾ:- ಕರ್ಮಫಲವನ್ನು ತ್ಯಾಗಮಾಡಬೇಕು. (೨-೪೭), ಅಕರ್ಮದಲ್ಲಿ ಸಂಗವನ್ನಿಡಬಾರದು (೨-೪೭) ಸಂಗವನ್ನು ಅಂದರೆ ಫಲಸ್ನೇಹವನ್ನು ಬಿಡಬೇಕು (೨-೪೮) ಸರ್ವಕಾಮಗಳನ್ನು ತ್ಯಜಿಸಬೇಕು (೨-೫೫) ದುಃಖದಲ್ಲಿ ಉದ್ವಿಗ್ನಮನಸ್ಕನಾಗದೆಯೂ ಸುಖದಲ್ಲಿ ವಿಶೇಷ ಆಶೆಯನ್ನು ಇಡದೆಯೂ ಇರಬೇಕು (೨-೫೫) ರಾಗ ಭಯಕ್ರೋಧಗಳನ್ನು ಬಿಡಬೇಕು (೨-೫೬) ಶುಭಾಶುಭಗಳಲ್ಲಿ ಅಭಿಸ್ನೇಹವಿಡಬಾರದು (೨-೫೭) ಇಂದ್ರಿಯಗಳ ಸಂಯಮನ ಮಾಡಬೇಕು (೨-೬೦) ಮನಃ ಸಂಯಮನಮಾಡಬೇಕು (೨-೬೧) ನಿರ್ಮಮನಾಗಬೇಕು, ನಿರಹಂಕಾರಿಯಾಗಬೇಕು (೨-೭೧) ವಿಗತಜ್ವರನಾಗಬೇಕು, (೩-೩೦) ಕಾಮ ಸಂಕಲ್ಪಗಳನ್ನು ಬಿಡಬೇಕು (೪-೧೯) ಕರ್ಮಫಲಾಸಂಗವನ್ನು ಬಿಡಬೇಕು (೪-೨೦) ಸರ್ವ ಸಂಗವನ್ನು ತ್ಯಜಿಸಬೇಕು(೪-೨೦) ದ್ವಂದ್ವಾತೀತನಾಗಬೇಕು (೪-೨೦) ಇವೇ ಮುಂತಾದವುಗಳಲ್ಲಿ ಸಂನ್ಯಾಸವು ವಿವಿಧರೀತಿಯಿಂದ ವರ್ಣಿಸಲ್ಪಟ್ಟಿದೆ. ಇವುಗಳನ್ನೆಲ್ಲ ಒಟ್ಟುಗೂಡಿಸಿ, ಸ್ವಲ್ಪದರಲ್ಲಿ ಹೇಳುವುದಾದಲ್ಲಿ ಕಾಮ ಕ್ರೋಧಾದಿಗಳನ್ನು ಬಿಡುವುದು ಸಂನ್ಯಾಸ, ಸುಖದುಃಖಾದಿ ದ್ವಂದ್ವಗಳನ್ನು ಸಮನಾಗಿ ತಿಳಿಯುವುದು ಸಂನ್ಯಾಸ, ಕರ್ತೃತ್ವಾಭಿಮಾನವನ್ನು ಬಿಡುವುದು ಸಂನ್ಯಾಸ, ಫಲಕಾಮನೆಯನ್ನು ಬಿಡುವುದು ಸಂನ್ಯಾಸವೆಂದು ಹೇಳಬಹುದು. ಸಂನ್ಯಾಸದಲ್ಲಿ ಹೀಗೆ ಅನೇಕ ವರ್ಗಗಳನ್ನು ಮಾಡಲಿಕ್ಕೆ ಬರುವಂತೆ ಯೋಗದಲ್ಲಿ ವರ್ಗಗಳನ್ನು ಮಾಡಲಿಕ್ಕೆ ಬರುವುದಿಲ್ಲ. ಏಕೆಂದರೆ ಯೋಗವೆಂದರೆ ಈಶ್ವರಾರ್ಪಣ ಬುದ್ಧಿ, ಇದು ಯಾವಾಗಲೂ ಒಂದೇ ಇರುತ್ತದೆ. ಆದಕಾರಣ, ಸಕೃದ್ದರ್ಶನಕ್ಕೆ ಗೀತೆಯಲ್ಲಿ ಸಂನ್ಯಾಸವೇ ಹೆಚ್ಚಿಗೆ ಬಂದಂತೆ ಕಾಣುತ್ತದೆ. ಈ

ಯೋಗವನ್ನು ಗೀತೆಯು ಎಲ್ಲಕ್ಕೂ ಮುಂಚೆ ಸೂಚಿಸಿದ ಶ್ಲೋಕವೆಂದರೆ ೨-೪೫. ಇದರಲ್ಲಿ ಮನುಷ್ಯನು ನಿತ್ಯಸತ್ವಸ್ಥನೂ ಆತ್ಮವಂತನೂ ಆಗಬೇಕೆಂದು ಹೇಳಿದೆ. ಮುಂದೆ ಈ ಯೋಗವನ್ನು 'ಮತ್ಪರ'ನಾಗಬೇಕು (೨-೬೧). ಯಜ್ಞಾರ್ಥವಾಗಿ ಅಂದರೆ ವಿಷ್ಣು ಪ್ರೀತಿಗೋಸ್ಕರ ಕರ್ಮಮಾಡಬೇಕು (೩-೯) ಸರ್ವಕರ್ಮಗಳನ್ನು ನನಗೆ ಸಮರ್ಪಿಸಿ ಕರ್ಮಮಾಡಬೇಕು (೩-೩೦) ಮನ್ಮಯನಾಗಬೇಕು ಅಂದರೆ ಪರಮಾತ್ಮನಲ್ಲಿಯೇ ಸದಾ ಮನಸ್ಸನ್ನಿಡಬೇಕು, ಮತ್ತು ಆತನನ್ನೆ ಆಶ್ರಯಿಸಿರಬೇಕು (೪-೧೦) ಯಜ್ಞಕ್ಕೋಸ್ಕರಮಾಡಿದ ಕರ್ಮವೆಲ್ಲವೂ ಪ್ರವಿಲೀನವಾಗುತ್ತದೆ. (೪-೨೩) ಯಜ್ಞದ ಉಪಕರಣಗಳೇ ಮುಂತಾದವುಗಳೆಲ್ಲವೂ ಭಗವಂತನ ಅಧೀನವೆಂಬ ಬುದ್ಧಿಯಿಂದ ಕರ್ಮಮಾಡಬೇಕು. (೪-೨೪): 'ತತ್ಪರ' ಅಂದರೆ ಪರಮಾತ್ಮಪರನಾದವನಿಗೆ ಜ್ಞಾನವು ದೊರಕುತ್ತದೆ (೪-೩೯) ಮುಂತಾದ ಹಲವು ಶ್ಲೋಕಗಳಲ್ಲಿ ಮಾತ್ರವೇ ವರ್ಣಿಸಲ್ಪಟ್ಟಿದೆ. ಸಮತ್ವವೇ ಯೋಗವು, (೨-೪೮) ಯೋಗವೆಂದರೆ ಕರ್ಮವನ್ನು ಕುಶಲತನದಿಂದ ಮಾಡುವುದು (೨-೫೦) ಇವು ಈಶ್ವರಾರ್ಪಣಬುದ್ಧಿಯೆಂಬ ಯೋಗದ ವ್ಯಾಖ್ಯೆಗಳಲ್ಲ; ಸಂನ್ಯಾಸದ ವ್ಯಾಖ್ಯೆಗಳು. ಯೋಗವೆಂದರೆ ಸಾಮಾನ್ಯವಾಗಿ ಉಪಾಯವೆಂಬ ಅರ್ಥದಲ್ಲಿ ಸಂನ್ಯಾಸವೂ ಒಂದು ರೀತಿಯಿಂದ ಯೋಗವೇ ಸರಿ. ಸಮತ್ವವೇ ಯೋಗವು ಎಂಬುದೊಂದೇ ಸಂನ್ಯಾಸದ ವ್ಯಾಖ್ಯೆಯು. ಕರ್ಮವನ್ನು ಕುಶಲತನದಿಂದ ಮಾಡುವುದು ಎಂಬುದು ವ್ಯಾಖ್ಯೆಯಲ್ಲ, ವರ್ಣನೆಯು. ಇರಲಿ. ಹೀಗೆ, ಹಿಂದಿನ ಪ್ರಕರಣಗಳಲ್ಲಿ ಕರ್ಮಯೋಗದ ಎರಡೂ ಅಂಗಗಳು ಬಂದಿರುತ್ತವೆ. ಅವೆರಡೂ ಅಂಗಗಳನ್ನು ಈ ೫ನೆಯ ಅಧ್ಯಾಯದಲ್ಲಿ ಹೆಚ್ಚಿಗೆ ಸ್ಪಷ್ಟವಾಗಿ ವಿವರಿಸಿ ಈ ಕರ್ಮಯೋಗದ ವಿಷಯವನ್ನು ಮುಗಿಸಿರುತ್ತಾರೆ.

ಅನೇಕ ಕಡೆಗೆ ಸಂನ್ಯಾಸ, ಕೆಲವು ಕಡೆಗೆ ಯೋಗ ಇವೆರಡುಗಳ ಸ್ತುತಿ ಬಂದಿರುವುದರಿಂದ ಇದು ಒಳ್ಳೆಯದೋ ಅದು ಒಳ್ಳೆಯದೋ ಎಂಬ ಸಂದೇಹವುಂಟಾಗುವುದು ಸಹಜವಿದೆ. ಅದಕ್ಕೆ ಕೃಷ್ಣನು ಹೇಳುವುದೇನೆಂದರೆ ಅವೆರಡೂ ಕರ್ಮಯೋಗಕ್ಕೆ ಆವಶ್ಯಕಗಳೇ, ಅವೆರಡರಲ್ಲಿಯೇ ತುಲನೆ ಮಾಡಿಯಾವುದು ಹೆಚ್ಚಿನದೆಂದು ಹೇಳುವುದಾದಲ್ಲಿ, ಸಂನ್ಯಾಸಕ್ಕಿಂತಲೂ ಯೋಗವು ಹೆಚ್ಚಿನದೆಂದು ಹೇಳಬೇಕಾಗುತ್ತದೆ. ವಸ್ತುತಃ ಇವೆರಡೂ ಜ್ಞಾನಕ್ಕೇನೇ ಸಾಧನಗಳಾಗಿರುವುದರಿಂದ ಆ ದೃಷ್ಟಿಯಿಂದ ಅವೆರಡೂ ಒಂದೇ ಎಂದೂ ಹೇಳಬಹುದು. ಆದರೆ ಅವೆರಡೂ ಸಮಕಕ್ಷಿಗಳಾದ ಅಂದರೆ ತುಲ್ಯಬಲವುಳ್ಳ ಸಾಧನಗಳಲ್ಲ. ಯೋಗವು ಸಂನ್ಯಾಸಕ್ಕಿಂತ ಹೆಚ್ಚಿಗೆ ಬಲವುಳ್ಳ ಸಾಧನವು. ಏಕೆಂದರೆ, ಕೇವಲ ಸಂನ್ಯಾಸವನ್ನು ಸಾಧಿಸುವುದು ಬಹಳ ಶ್ರಮದ ಕೆಲಸ. ಜೈನರಂತೆ ಕೇವಲ ಜಿತೇಂದ್ರಿಯನಾಗುವುದೇ ಮನುಷ್ಯನು ತನ್ನ ಧ್ಯೇಯವೆಂದು ಇಟ್ಟುಕೊಂಡರೆ ಅದನ್ನು

ಸಾಧಿಸುವುದಕ್ಕೆ ಬಹಳ ಕಠಿನವಾಗುತ್ತದೆ. ಅದೇ, ಪರಮಾತ್ಮನಲ್ಲಿ ನಿಷ್ಠೆಯನ್ನು ಇಟ್ಟು ತನ್ಮೂಲಕ ಕಾಮಕ್ರೋಧಾದಿಗಳನ್ನು ವರ್ಜಮಾಡುವುದು ಸುಲಭಸಾಧ್ಯವಾಗುತ್ತದೆ. ಹೀಗೆ ಸಂನ್ಯಾಸಕ್ಕೆ ಯೋಗದ ಬೆಂಬಲವಿದ್ದರೆ ಒಳ್ಳೆಯದು. ಅದರ ಮೂಲಕ ಬ್ರಹ್ಮನನ್ನು ಬಲು ಬೇಗನೆ ಪಡೆಯಬಹುದು. ಆದಕಾರಣ, ಕರ್ಮ ಯೋಗವೆಂದರೆ ಸಂನ್ಯಾಸ + ಯೋಗ. ಇವೆರಡೂ ಕೂಡಿದ್ದೇ ಕರ್ಮಯೋಗ.

**ತನು ನಿನ್ನದು ಜೀವನ ನಿನ್ನದು ರಂಗ |**
**ಅನುದಿನದಲಿ ಬಾಹೋ ಸುಖದುಃಖ ನಿನ್ನದಯ್ಯಾ**

-ಕನಕದಾಸರು

ಎಂಬಂತೆ ಈಶ್ವರನಲ್ಲಿ ಸರ್ವಕರ್ಮಗಳನ್ನು ಮನಸ್ಸಿನಿಂದ ಸಮರ್ಪಿಸಿ, ಮಾಡುವವನು ತಾನಲ್ಲವೆಂಬ ಭಾವನೆಯಿಂದ ಜೀವನು ಒಂಭತ್ತು ಬಾಗಿಲುಗಳುಳ್ಳ ತನ್ನ ದೇಹವೆಂಬ ಪಟ್ಟಣದಲ್ಲಿ ಸ್ವಸ್ಥವಾಗಿ ಮಲಗಿರುತ್ತಾನೆ.

**ಬೀಗಮುದ್ರೆಗಳಿಲ್ಲದೂರಿಗೆ**
**ಬಾಗಿಲೊಂಭತ್ತು ಹಗಲಿರು**
**ಳಾಗಿ ಮುಚ್ಚದೆ ತೆರೆದಿಹುದು ಜೀವಾತ್ಮ ತಾನಿರುತ**

-ಕನಕದಾಸ

ಎಂಬಂತೆ ಮನುಷ್ಯನು ಎಲ್ಲವನ್ನೂ ಪರಮಾತ್ಮನಿಗೆ ಸಮರ್ಪಿಸುವುದೇ ಲೇಸು. ಹೀಗೆ ಸರ್ವಕರ್ಮಗಳನ್ನು ಈಶ್ವರನಿಗೆ ಸಮರ್ಪಿಸುವವನು ಕರ್ತೃತ್ವಾಭಿಮಾನವನ್ನು ಬಿಡುತ್ತಾನೆಂಬುದಷ್ಟೇ ಅಲ್ಲ, ಕಾರಯಿತೃ ಅಭಿಮಾನವನ್ನೂ ಬಿಡುತ್ತಾನೆ, ಅಂದರೆ ಮಾಡಿಸುವವನೂ ತಾನಲ್ಲವೆಂದು ತಿಳಿಯುತ್ತಾನೆ. ಈ ಅಭಿಮಾನತ್ಯಾಗವೂ ಸಂನ್ಯಾಸವೇ. ಕರ್ಮಗಳು ಜೀವನ ವಶವಲ್ಲ, ಕರ್ಮಗಳನ್ನು ಮಾಡುವುದು ಬಿಡುವುದು ಜೀವನ ಅಧೀನದ ಮಾತಲ್ಲ, ಕರ್ಮಗಳಿಗೆ ಫಲಕೊಡುವವನು ಜೀವನಲ್ಲ. ಇವೆಲ್ಲಕ್ಕೂ ಬಾಧ್ಯನು ಪರಮಾತ್ಮನು. ಜೀವನು ಇವು ತನ್ನ ವಶವೆಂದು ತಿಳಿಯುವುದು ಆತನ ಭ್ರಮ.

ಜಗತ್ತೆಲ್ಲವೂ ಈ ತರಹದ ಅಜ್ಞಾನದಿಂದ ಮೋಹಿತವಾಗಿರುತ್ತದೆ. ಪ್ರತಿಯೊಬ್ಬನೂ ತಾನು ಕರ್ಮಮಾಡುವವನು, ಯಾವ ಕರ್ಮವನ್ನು ಮಾಡಬೇಕು ಯಾವುದನ್ನು ಬಿಡಬೇಕು ಎಂಬುದನ್ನು ನಿಶ್ಚಯಿಸುವವನು ತಾನು, ತಾನು ಮಾಡಿದ ಕರ್ಮಗಳಿಗೆ ಫಲವನ್ನು ದೊರಕಿಸುವುದು ತನ್ನ ಕೈಯೊಳಗಿನ ಮಾತು ಎಂದು ತಿಳಿಯುತ್ತಾನೆ. ಆದರೆ ಇದು ಬರೀ ಮೋಹ, ಅಜ್ಞಾನ. ಪರಮಾತ್ಮನ ನಿಜವಾದ ಜ್ಞಾನವನ್ನು ಗಳಿಸಿ ಈ ಅಜ್ಞಾನವನ್ನು ದೂರಮಾಡಿಕೊಳ್ಳಬೇಕು. ಅದಕ್ಕೋಸ್ಕರ

ಆತನಲ್ಲಿಯೇ ತಮ್ಮ ಮನೋಬುದ್ಧಿಗಳನ್ನಿಟ್ಟು, ತತ್ಪರಾಯಣರಾಗಬೇಕು. ಹಾಗೆ ಮಾಡಿದರೆ ಅಪುನರಾವೃತ್ತಿಯಾದ ಮೋಕ್ಷವು ಸಿಗುತ್ತದೆ. ಈ ಬಗೆಯಾಗಿ ಶ್ರೀಕೃಷ್ಣನು ಸಂನ್ಯಾಸ ಮತ್ತು ಯೋಗ ಇವುಗಳ ಸಂಬಂಧವಾಗಿ ಹೇಳತಕ್ಕದ್ದನ್ನೆಲ್ಲ ಹೇಳಿ ಪುನಃ ಆ ಕರ್ಮಯೋಗದ ಫಲವಾದ ಜ್ಞಾನದ ಕಡೆಗೆ ಹೊರಳಿರುತ್ತಾನೆ. ಪರಮಾತ್ಮನ ಈ ಅಪರೋಕ್ಷ ಜ್ಞಾನಕ್ಕೆ ಸಾಧನಗಳು ಯಾವುವೆಂಬುದನ್ನು ವರ್ಣಿಸಿರುತ್ತಾನೆ. ಆ ಸಾಧನಗಳು ಯಾವುವೆಂದರೆ (೧) ಆತನಲ್ಲಿ ಬುದ್ಧಿಯಿಡುವುದು (೨) ಆತನಲ್ಲಿ ಮನಸ್ಸಿಡುವುದು (೩) ಆತನನ್ನೇ ಸದಾ ಚಿಂತಿಸುವುದು. ಈ ಸಾಧನಗಳಲ್ಲದೆ, ಸಮದರ್ಶನವೂ ಒಂದು ಸಾಧನವು. ಇವೆಲ್ಲ ಸಾಧನಗಳು ಯೋಗದಲ್ಲಿ ಸೇರುತ್ತವೆ. ವಿದ್ಯಾವಿನಯಸಂಪನ್ನನಾದ ಬ್ರಾಹ್ಮಣನೇ ಇರಲಿ, ಆಕಳವೇ ಇರಲಿ, ಆನೆಯೇ ಇರಲಿ, ನಾಯಿಯೇ ಇರಲಿ, ಅಥವಾ ಚಂಡಾಲನೇ ಇರಲಿ. ಅವರೆಲ್ಲರಲ್ಲಿಯೂ ಪಂಡಿತರು ಸಮದರ್ಶಿಗಳಾಗಿರುತ್ತಾರೆ. ಏಕೆಂದರೆ ಅವರೆಲ್ಲರಲ್ಲಿಯೂ ಒಬ್ಬನೇ ಪರಮಾತ್ಮನಿರುತ್ತಾನೆ. ಈಗಿನವರು ಈ ಶ್ಲೋಕದ ಅರ್ಥವನ್ನು ವಿಪರೀತವಾಗಿ ಮಾಡಿ, ಅವರೆಲ್ಲರನ್ನೂ ಸಮನಾಗಿ ಕಾಣುವುದೆಂದರೆ ಎಲ್ಲರನ್ನೂ ಎಲ್ಲ ವಿಧದಿಂದಲೂ ಸಮಾನವಾಗಿ ನಡೆಯಿಸಿಕೊಳ್ಳುವುದು ಎಂದು ಅರ್ಥ ಮಾಡುತ್ತಾರೆ. ಇದಕ್ಕಿಂತ ಹೆಚ್ಚಿನ ಕುರುಡತನವು ಅಥವಾ ಹಟಮಾರಿತನವು ಮತ್ತಾವದಿರಬೇಕು ? ಇಲ್ಲಿ ಶ್ರೀಕೃಷ್ಣನು ಹೇಳಿದುದು ಅವರೆಲ್ಲರೂ ಎಲ್ಲರೀತಿಯಿಂದಲೂ ಸಮರೆಂದಲ್ಲವೆಂಬುದು ಸಹಜವಾಗಿ ತಿಳಿಯುವಂತಿದೆ.

ಇರಲಿ; ಶ್ರೀಕೃಷ್ಣನು ಈ ಅಧ್ಯಾಯದಲ್ಲಿ ಒಮ್ಮೆ ಸಂನ್ಯಾಸದ ಪ್ರಪಂಚನವನ್ನೂ ಒಮ್ಮೆ ಯೋಗದ ಪ್ರಪಂಚನವನ್ನೂ ಮಾಡಿ ಇವೆರಡೂ ವಿಷಯಗಳನ್ನು ಮೇಲಿಂದ ಮೇಲೆ ಸ್ಪಷ್ಟವಾಗಿ ತಿಳಿಸಿ ಹೇಳಿರುವನು. ಮತ್ತು ಯೋಗವೇ ಹೆಚ್ಚಿನದೆಂದು ಸಿದ್ಧಾಂತಮಾಡಿರುವನು. ಕೊನೆಗೆ, ಈ ಕರ್ಮಯೋಗದಿಂದುಂಟಾಗತಕ್ಕ ಅಪರೋಕ್ಷಜ್ಞಾನದ ಲಕ್ಷಣಗಳನ್ನು ಹೇಳಿ, ಅಂಥ ಅಪರೋಕ್ಷಜ್ಞಾನಕ್ಕೆ ಧ್ಯಾನವು ಅವಶ್ಯವೆಂಬ ವಿಷಯವನ್ನು ಸೂಚಿಸಿ ಈ ಅಧ್ಯಾಯವನ್ನು ಮುಗಿಸಿರುವನು. ಸಂನ್ಯಾಸದಿಂದ ಕಾಮಕ್ರೋಧಾದಿಗಳನ್ನು ದೂಡಿದಾಗ, ಮನುಷ್ಯರ ಮನಸ್ಸಿನಲ್ಲಿ ಒಂದು ವಿಲಕ್ಷಣವಾದ ಆನಂದವು ಉಂಟಾಗುತ್ತದೆ. ಆಗ ಮನುಷ್ಯರು ಪರಮಾತ್ಮನ ಧ್ಯಾನದಲ್ಲಿ ಮಗ್ನನಾಗುತ್ತಾರೆ. ಅಂಥ ಋಷಿಗಳು ತಮ್ಮ ಸಂದೇಹಗಳೆಲ್ಲವನ್ನೂ ಕಳೆದುಕೊಂಡು, ಸರ್ವಪ್ರಾಣಿಗಳ ಹಿತದಲ್ಲಿ ತೊಡಗಿರುತ್ತಾರೆ. ಪರಮಾತ್ಮನೇ ಕಾಣುತ್ತಾನೆ. ಅವರಿಗೆ ಎಲ್ಲೆಲ್ಲಿಯೂ

**ಅಂತರಂಗದ ಕದವು ತೆರೆಯತಿಂದು |**

**ಎಂತು ಪುಣ್ಯದ ಫಲವು ದೊರಕಿತೋ |**

-ವಿಜಯದಾಸರು

ಎಂದು ಅವರು ಪರಮಾತ್ಮನಲ್ಲಿಯೇ ಆನಂದಪಡುತ್ತ ಒಳಬೆಳಕಿನಲ್ಲಿಯೇ ಪರಮಾತ್ಮನನ್ನು ಸದಾ ಕಾಣುತ್ತಾರೆ. ಮತ್ತು

**ಆನಂದ ಆನಂದ ಮತ್ತೆ ಪರಮಾನಂದ |**
**ಆನಂದನ ಕಂದನೊಲಿಯೆ ಏನಂದದ್ದೆ ವೇದವೃಂದ |**

-ವಿಜಯದಾಸರು

ಎಂಬುದಾಗಿ ಹಾಡುತ್ತ ಅವರು ಸದಾ ಆನಂದದಲ್ಲಿ ಮುಳುಗಿರುತ್ತಾರೆ. ಬಾಹ್ಯ ವಿಷಯಗಳನ್ನು ಹೊರದೂಡಿ, ಎರಡೂ ಹುಬ್ಬುಗಳ ನಡುವೆ ದೃಷ್ಟಿ ಇಟ್ಟು ಪ್ರಾಣಾಪಾನಗಳೆರಡನ್ನೂ ಸಮಗೊಳಿಸಿ, ಇಂದ್ರಿಯ, ಮನಸ್ಸು ಮತ್ತು ಬುದ್ಧಿ ಇವುಗಳನ್ನು ಬಿಗಿಹಿಡಿದು ಯಜ್ಞ ತಪಸ್ಸುಗಳ ಭೋಕ್ತಾರನೂ ಎಲ್ಲ ಲೋಕಗಳಿಗೆ ಸ್ವಾಮಿಯೂ ಎಲ್ಲ ಪ್ರಾಣಿಗಳ ಮಿತ್ರನೂ ಆ ಪರಮಾತ್ಮನು ಎಂಬುದಾಗಿ ಆತನನ್ನು ಧ್ಯಾನಿಸಬೇಕು.

**ಲಗ್ಗೆಯೋ ವೈಕುಂಠ- ಲಗ್ಗೆಯೋ ವೈಕುಂಠ-ಪಲ್ಲ**
**ಭೂಮಧ್ಯದೆಡೆಯೊಳು ನಾಸಿಕಾಗ್ರದೊಳು |**
**ನೇಮದಿಂದ ದೃಷ್ಟಿಯನಿಲ್ಲಿಸಿ |**
**ಪ್ರೇಮದಿ ಪುರಂದರ ವಿಠ್ಠಲನ ಭಜಿಸುತ |**
**ಭೂಮಿಯೊಳಿಹ ಬುದ್ಧಿವಂತ ಮನುಜರಿಗೆ**

-ಪುರಂದರ ದಾಸರು

೧೧ನೆಯ ಪ್ರಕರಣ

( ೬ನೆಯ ಅಧ್ಯಾಯದ ತಾತ್ಪರ್ಯ)

# ಧ್ಯಾನಯೋಗ

ಆರನೆಯ ಅಧ್ಯಾಯದ ಮುಖ್ಯ ವಿಷಯವು ಧ್ಯಾನಯೋಗವು. ಇಲ್ಲಿಯವರೆಗೆ ಕರ್ಮಯೋಗವು ಚರ್ಚಿಸಲ್ಪಟ್ಟಿತು. ಈಗ ಒಮ್ಮೆಲೆ ಈ ಧ್ಯಾನಯೋಗದ ವಿಷಯವು ಏಕೆ ಬಂದಿತು, ಅದಕ್ಕೂ ಕರ್ಮಯೋಗಕ್ಕೂ ಯಾವ ಸಂಬಂಧವಿದೆ ಎಂಬುದನ್ನು ಮುಂಚೆ ತಿಳಿದುಕೊಳ್ಳಬೇಕು.

ಕರ್ಮಯೋಗದ ಅಂದರೆ ನಿಷ್ಕಾಮವಾಗಿಯೂ ಈಶ್ವರಾರ್ಪಣ ಬುದ್ಧಿಯಿಂದಲೂ ಮಾಡಲ್ಪಟ್ಟ ಸ್ವೋಚಿತಕರ್ಮಾನುಷ್ಠಾನದ ಉದ್ದೇಶವು ಅಪರೋಕ್ಷಜ್ಞಾನವನ್ನು ಗಳಿಸುವುದು. ಇಂಥ ಕರ್ಮಾನುಷ್ಠಾನದಿಂದ ಅಂತಃಕರಣಶುದ್ಧಿಯಾಗಿ ಮನುಷ್ಯನು ದೇವರ ಧ್ಯಾನ ಮಾಡಲಿಕ್ಕೆ ಅರ್ಹನಾಗುತ್ತಾನೆ. ಅಂದರೆ, ಕರ್ಮಯೋಗವು ಈ ರೀತಿಯಿಂದ ಧ್ಯಾನಯೋಗಕ್ಕೆ ಸಾಧನವಿರುತ್ತದೆ. ಮತ್ತೊಂದು ರೀತಿಯಿಂದ, ಧ್ಯಾನಯೋಗವು ಅಪರೋಕ್ಷಜ್ಞಾನಕ್ಕೆ ಸಾಕ್ಷಾತ್ ಸಾಧನವೂ ಇರುತ್ತದೆ.

ಈ ಧ್ಯಾನಯೋಗಕ್ಕೆ ಅಧಿಕಾರಿಗಳು ಯಾರು ಎಂಬುದೇ ಮೊದಲನೆಯ ಪ್ರಶ್ನೆ. ಕರ್ಮಫಲಬಯಸದೆ, ತನಗೆ ಉಚಿತವಾದ ಕರ್ಮ ಮಾಡುವವನು ಅದಕ್ಕೆ ಅಧಿಕಾರಿಯು. ಆತನೇ ಸಂನ್ಯಾಸಿಯು; ಯೋಗಿಯೂ ಆತನೇ. ಕೇವಲ ಸಂನ್ಯಾಸಾಶ್ರಮ ಸ್ವೀಕರಿಸಿದ ಮಾತ್ರಕ್ಕೆ ಆ ಅಧಿಕಾರವು ಪ್ರಾಪ್ತವಾಗುವುದಿಲ್ಲ. ಬ್ರಹ್ಮಚಾರಿ, ಗೃಹಿ ಮತ್ತು ವಾನಪ್ರಸ್ಥಾಶ್ರಮಿಗಳೂ ಅವರು ಮೇಲೆ ಹೇಳಿದಂತೆ ಕರ್ಮಫಲವನ್ನು ಬಯಸದೆ ತಮ್ಮ ಕರ್ತವ್ಯಮಾಡುತಿದ್ದರೆ-ಧ್ಯಾನಕ್ಕೆ ಅಧಿಕಾರಿಗಳೇ ಇರುತ್ತಾರೆ. ಸಾರಾಂಶ, ಕರ್ಮಯೋಗಿಗಳು ಧ್ಯಾನಕ್ಕೆ ಅಧಿಕಾರಿಗಳು. ಹೀಗೆ ಕರ್ಮಯೋಗಿಗಳು ಧ್ಯಾನಕ್ಕೆ ಅಧಿಕಾರಿಗಳಿದ್ದ ಬಳಿಕ, ಧ್ಯಾನಯೋಗವು ಪ್ರಾರಂಭವಾದ ಕೂಡಲೆ ಕರ್ಮಮಾಡುವುದನ್ನು ಬಿಟ್ಟೇ ಬಿಡಬೇಕೋ ಎಂಬ ಪ್ರಶ್ನೆಯು ಉದ್ಭವಿಸುತ್ತದೆ. ಅದಕ್ಕೆ ಉತ್ತರವೇನೆಂದರೆ, ಇಲ್ಲ; ಹಾಗೆ ಕರ್ಮಗಳನ್ನು ಬಿಡುವ ಕಾರಣವಿಲ್ಲ. ಕರ್ಮಗಳಲ್ಲಿ ಅನೇಕ ವಿಧ ಕರ್ಮಗಳು ಸೇರುತ್ತವೆ. ಉದಾ-ಸಂಧ್ಯಾವಂದನಾದಿಗಳನ್ನು ಮಾಡುವುದು, ಅಗ್ನಿ ಹೋತ್ರಾದಿ ಯಜ್ಞಗಳನ್ನು ಮಾಡುವುದು, ತಮಗಿಂತ ಉತ್ತಮ ಅಧಮ ಮಧ್ಯಮರಾದವರ ಸೇವೆಯನ್ನು ಮಾಡುವುದು ಅಂದರೆ ನಾನಾಜನ ಶುಶೂಷೆ (ಇದಕ್ಕೇನೆ ಈಗ ಜನತಾ ಜನಾರ್ದನನ ಸೇವೆಯೆನ್ನುವರು.)-ಇವೇ ಮುಂತಾಗಿ ಅನೇಕವಿಧ ಕರ್ಮಗಳಿರುತ್ತವೆ. ಧ್ಯಾನಯೋಗವನ್ನು

ಮಾಡಲಿಕ್ಕೆ ಇಚ್ಛಿಸುವವನು ಇವೆಲ್ಲ ತರಹದ ಕರ್ಮಗಳನ್ನೂ ಮಾಡಲೇಬೇಕು. ಇವೆಲ್ಲ ಕರ್ಮಗಳನ್ನು ಮಾಡುವುದರಿಂದ ಆತನಿಗೆ ಧ್ಯಾನಮಾಡುವ ಅರ್ಹತೆ ಉಂಟಾಗುತ್ತದೆ. ಅಂದರೆ ಆತನು ಯೋಗಾರೂಢನಾಗುತ್ತಾನೆ. ಆಗ, ಆತನು ಮಾಡುವ ಕರ್ಮಗಳ ಸ್ವರೂಪವು ಮಾತ್ರ ಬೇರೆಯಾಗುತ್ತದೆ. ಅಂದರೆ ಆತನು ಆಗ ಬಾಹ್ಯ ಮತ್ತು ಶಾರೀರಿಕ ಕರ್ಮಗಳಿಗಿಂತಲೂ ಮಾನಸಿಕ ಕರ್ಮಗಳಿಗೆ ಹೆಚ್ಚು ಬೆಲೆ ಕೊಡುತ್ತಾನೆ. ಮತ್ತು ಆತನು ದೇವರ ಧ್ಯಾನ ಮಾಡುವುದು, ಆತನಲ್ಲಿ ಭಕ್ತಿಯನ್ನಿಡುವುದು, ಪೂಜೆ ಅರ್ಚನಾದಿಗಳನ್ನು ಮಾಡುವುದು, ಅಧ್ಯಯನ ಅಧ್ಯಾಪನಾದಿಗಳನ್ನು ಮಾಡುವುದು ಇವೇ ಮುಂತಾದ ಕರ್ಮಗಳಲ್ಲಿ ತನ್ನ ಮನಸ್ಸನ್ನು ಹೆಚ್ಚಿಗೆ ತೊಡಗಿಸುತ್ತಿರುತ್ತಾನೆ. ಕರ್ಮಯೋಗದಲ್ಲಿ ಮುಖ್ಯವಾದುದು ನಾನಾಜನ ಶುಶ್ರೂಷೆ, ಎಂದರೆ ಸಮಾಜಸೇವೆ, ಅರಸನಿಗೆ ಹೇಗೆ ಪ್ರತಿಯೊಬ್ಬನು ಕಪ್ಪನ್ನು ಒಪ್ಪಿಸಲೇಬೇಕೋ ಹಾಗೆ ಪ್ರತಿಯೊಬ್ಬ ಕರ್ಮಯೋಗಿಯು ಈ ಮಾನವಸೇವೆಯನ್ನು ಮಾಡಲೇಬೇಕು. ಆದರೆ, ಮುಂದೆ, ಧ್ಯಾನಯೋಗವನ್ನು ಮಾಡಹತ್ತಿದನೆಂದರೆ ಈ ಜನತಾಜನಾರ್ದನಸೇವೆಯ ಅಗತ್ಯವಿಲ್ಲ. ಮಾನವಸೇವೆ ಮಾಡುವ ರೀತಿಯಲ್ಲಿ ಸ್ವಲ್ಪ ಭೇದವುಂಟಾಗುತ್ತದೆ. ಆಗ, ಆತನು ಸಿಕ್ಕ ಸಿಕ್ಕವರ ಸೇವೆಯನ್ನು ಮಾಡುವುದರಲ್ಲಿ ವ್ಯರ್ಥ ಕಾಲಹರಣಮಾಡುವುದಿಲ್ಲ. ತನಗಿಂತ ವರಿಷ್ಟರಾದವರ ಸೇವೆಯಲ್ಲಿ ಮಾತ್ರ ಮಗ್ನನಾಗುತ್ತಾನೆ. ಅಂದರೆ ಆಗ ಪಾಮರರ ಸೇವೆಯ ಬದಲು ಪಂಡಿತರ ಸೇವೆಯನ್ನು ಹೆಚ್ಚಿಗೆ ಮಾಡುತ್ತಾನೆ. ಆದರೆ, ಆಗ ಕೂಡ, ಸೇವೆಯು ತಪ್ಪಿದ್ದಲ್ಲ. ಏಕೆಂದರೆ, ಧ್ಯಾನಯೋಗಿಯು ಕೂಡ, ಸದಾಸರ್ವದಾ ಇಪ್ಪತ್ತುನಾಲ್ಕು ಗಂಟೆ ಪರಮಾತ್ಮನ ಧ್ಯಾನದಲ್ಲಿಯೇ ಮಗ್ನನಾಗಿರುವುದು ಶಕ್ಯವಿಲ್ಲವಷ್ಟೆ. ಆದಕಾರಣ, ಧ್ಯಾನದಿಂದ ಇಳಿದ ಕೂಡಲೆ ಆತನಿಗೆ ಕರ್ತವ್ಯಗಳು ಬೆನ್ನುಹತ್ತಿದವೇ. ಆ ಕರ್ತವ್ಯಗಳನ್ನು ಆತನು ಮಾಡುವ ರೀತಿಯು ಮಾತ್ರ ನಾವು ಮೇಲೆ ಹೇಳಿದಂತೆ ಭಿನ್ನವಾಗುತ್ತದೆ. ಕರ್ಮಗಳನ್ನು ಬಿಡುವವನು ಯೋಗಾರೂಢನಲ್ಲ; ವಿಷಯಗಳಲ್ಲಿಯೂ ಕರ್ಮಗಳಲ್ಲಿಯೂ ಅನಾಸಕ್ತನಾಗಿರುವವನು. ಎಂದರೆ ಸರ್ವಸಂಕಲ್ಪಗಳನ್ನು ಬಿಟ್ಟವನು ಯೋಗಾರೂಡನು. ಪರಮಾತ್ಮನನ್ನು ನಂಬಬೇಕು, ಮತ್ತು ಮನಸ್ಸಿನ ಮೂಲಕ ತನ್ನ ಉದ್ಧಾರವನ್ನು ತಾನು ಮಾಡಿಕೊಳ್ಳಬೇಕು. ತನಗೆ ತಾನೇ ಶತ್ರುವು.

**ಅವನ ಗೊಡವೆಯೇಕೆ ಅವನಾರು ನೀನಾರು |**
**ಅವನ ಪಾಪಕ್ಕೆ ನೀ ಭಾಗಾದಿಯೆ |**
**ಅವನುತ್ತಮನಾದಡವನೆ ಬದುಕಿದ ಕಾಣೊ |**
**ಅವ ಪುಣ್ಯ ಮಾಡಿದರೆ ಅವನ ಕುಲ ಉದ್ಧಾರ |**

-ವಿಜಯದಾಸರು

ತನಗೆ ತಾನೆ ಮಿತ್ರನು, ಜಿತಾತ್ಮನಿಗೆ ಪರಮಾತ್ಮನು, ಸದಾ ಕಾಣುತ್ತಾನೆ. ಅಂದರೆ ಅವನಿಗೆ ಧ್ಯಾನವು ಸಾಧ್ಯವು. ಅವನು ಜ್ಞಾನವಿಜ್ಞಾನಗಳಿಂದ ತೃಪ್ತನಾಗಿರುತ್ತಾನೆ, ಹೆಂಟೆಕಲ್ಲು ಬಂಗಾರಗಳನ್ನು ಸಮನಾಗಿ ಗಣಿಸುತ್ತಾನೆ.

**ಜಯಾಜಯ ಲಾಭಾಲಾಭ ಮಾನಾಪಮಾನ |**
**ಭಯಾಭಯ ಸುಖದುಃಖ ಲೋಷ್ಠ ಕಾಂಚನ |**
**ಪ್ರಿಯಾಪ್ರಿಯ ನಿಂದಾಸ್ತುತಿಗಳನುದಿನ |**
**ಶ್ರೀಯರಸ ಚಿಂತಿಸುವರೋ ನಿನ್ನಧೀನ**

-ಜಗನ್ನಾಥದಾಸರು

ಮತ್ತು ಸಾಧುಗಳೇ ಇರಲಿ, ಪಾಪಿಗಳೇ ಇರಲಿ, ಅವರೆಲ್ಲರಲ್ಲಿ ಸಮಬುದ್ಧಿಯನ್ನು ತಾಳಿರುತ್ತಾನೆ.

**ಹಿರಿದು ಕಿರಿದೆಂಬ ಶಬ್ದವಡಗಿದರೆ ಆತನೇ ಶರಣ.**

-ವಚನಶಾಸ್ತ್ರ

ಈ ಬಗೆಯಾಗಿ, ಧ್ಯಾನದ ಮಹತ್ವವನ್ನು ಹೇಳಿದಬಳಿಕ, ಧ್ಯಾನ ಮಾಡತಕ್ಕ ರೀತಿಯು ಈ ಅಧ್ಯಾಯದಲ್ಲಿ ವಿಸ್ತಾರದಿಂದ ವರ್ಣಿಸಲ್ಪಟ್ಟಿದೆ. ಧ್ಯಾನಮಾಡುವವನು ಏಕಾಂತ ಸ್ಥಳವನ್ನು ಆರಿಸಬೇಕು. ಚಿತ್ರವನ್ನೂ ಮನಸ್ಸನ್ನೂ ನಿರೋಧಿಸಬೇಕು. ಪವಿತ್ರವಾದ ಸ್ಥಳದಲ್ಲಿ ಸ್ಥಿರವಾದ ಆಸನವನ್ನು ಹಾಕಿಕೊಂಡು ಕುಳಿತುಕೊಂಡು, ಮೈ-ಕುತ್ತಿಗೆ-ತಲೆಗಳನ್ನು ಅಲ್ಲಾಡಿಸದೆ, ಮೂಗಿನ ತುದಿಯಲ್ಲಿಯೇ ದೃಷ್ಟಿಯನ್ನು ಇಟ್ಟು ಪರಮಾತ್ಮನ ಧ್ಯಾನದಲ್ಲಿ ಮಗ್ನನಾಗಬೇಕು. ಅತಿ ತಿಂದವನಿಗಾಗಲಿ ಅತಿ ಉಪವಾಸಮಾಡಿದವನಿಗಾಗಲಿ ಧ್ಯಾನವು ಬೇಗನೆ ಸಾಧಿಸುವುದಿಲ್ಲ. ನಿದ್ದೆಯಲ್ಲಿಯೂ, ಎಲ್ಲ ಕಡೆಗೆ ಅತಿಜಾಗ್ರತನಾಗಿರುವವನಿಗೂ ಅದು ಸಾಧಿಸುವುದಿಲ್ಲ. ಹೀಗೆ ಆತನು ಪರಮಾತ್ಮನ ಧ್ಯಾನದಲ್ಲಿ ಮಗ್ನನಾದಾಗ, ಆತನು ಮಿಕ್ಕಾವ ವಿಷಯವನ್ನೂ ಮನಸ್ಸಿನಲ್ಲಿ ತರಕೂಡದು. ಆತನ ಮನಸ್ಸು, ಗಾಳಿಯಿಲ್ಲದ ಸ್ಥಳದಲ್ಲಿಯ ದೀಪದಂತೆ ಅಚಲವಾಗಿರಬೇಕು.

**ಧ್ಯಾನವನು ಮಾಡು ಬಿಂಬ ಮೂರುತಿಯ || ಪಲ್ಲ ||**
**ಆನಂದದಲಿ ಕುಳಿತು ಅಂತರಂಗದಲಿ | ಅನುಪಲ್ಲ ||**
**ಪದುಮಾಸನವ ಹಾಕಿ ಪರಮ ವಿಶ್ವಾಸದಲಿ |**
**ಅಂಗವನು ಚಲಿಸದೆ ಚೆನ್ನಾಗಿ ದೃಢವಾಗಿ |**
**ಕಂಗಳನೆ ಮುಚ್ಚಿ ಇಂದ್ರಿಯಗಳನೆ ತೆರೆದು |**
**ಮಂಗಳ ಶೋಭಿತ ಅಖಂಡಧ್ಯಾನವಂತ |**
**ರಂಗದೊಳಗೆ ನಿಲಿಸಿ ಎಲ್ಲವನು ಕಾಣೋ ||**

-ವಿಜಯದಾಸರು

ಅಂಥವನಿಗೆ ಪರಮಾತ್ಮನನ್ನು ನೆನಿಸುವುದರಲ್ಲಿಯೇ ಆನಂದ. ಆಗ ಉಂಟಾಗುವ ಆನಂದವನ್ನು ವರ್ಣಿಸುವದಸದಳವಲ್ಲ. ಅದು ಅತೀಂದ್ರಿಯವಾದ ಆನಂದ; ಕೇವಲ ಬುದ್ಧಿಯಿಂದ ಮಾತ್ರವೇ ಗ್ರಾಹ್ಯವಾಗುವ ಆನಂದ. ಅದಕ್ಕಿಂತ ಹೆಚ್ಚಿನ ಆನಂದವೇ ಇಲ್ಲ. ಆಗ ದುಃಖದ ಲೇಶವೂ ಇರುವುದಿಲ್ಲ, ಎಂಥ ದೊಡ್ಡ ದುಃಖವೂ ಆತನನ್ನು ಅಲುಗಾಡಿಸದು. ನಡುನಡುವೆ, ಮನಸ್ಸು ಅಲುಗಾಡಹತ್ತಿದರೆ, ಅದನ್ನು ಮತ್ತೆ ಮತ್ತೆ ಹಿಡಿದು ತಂದು ಪರಮಾತ್ಮನಲ್ಲಿಯೇ ನಿಲ್ಲಿಸಬೇಕು. ಇಂಥ ಧ್ಯಾನಿಗೆ ಉತ್ಕೃಷ್ಟವಾದ ಸುಖವು ಪ್ರಾಪ್ತವಾಗುತ್ತದೆ. ಆಗ ಆತನಿಗೆ ಪರಮಾತ್ಮನ ದರ್ಶನವಾಗುತ್ತದೆ, ಸ್ಪರ್ಶನವಾಗುತ್ತದೆ. ಆಗ ಆತನು ಪರಮಾತ್ಮನಲ್ಲಿ ಸರ್ವಪ್ರಾಣಿಗಳು ಇರುವುದನ್ನೂ ಸರ್ವ ಪ್ರಾಣಿಗಳಲ್ಲಿ ಪರಮಾತ್ಮನಿರುವುದನ್ನೂ ಕಾಣುತ್ತಾನೆ. ಸರ್ವ ಪ್ರಾಣಿಗಳಲ್ಲಿರುವ ಪರಮಾತ್ಮನನ್ನು ಭಕ್ತಿಯಿಂದ ಪೂಜಿಸುತ್ತಾನೆ. ಎಂದರೆ ಆತನಿಗೆ ಎಲ್ಲೆಲ್ಲಿಯೂ ಪರಮಾತ್ಮನೇ ಕಾಣುವುದರಿಂದ ಆತನು ಎಲ್ಲ ಪ್ರಾಣಿಗಳ ಸೇವೆಯನ್ನು ಮಾಡುತ್ತಾನೆ. ಮತ್ತು ಎಲ್ಲರನ್ನೂ ತನ್ನಂತೆಯೇ ಬಗೆಯುತ್ತಾನೆ. ಅವರ ದುಃಖಗಳೇ ತನ್ನ ದುಃಖಗಳು. ಅವರ ಸುಖಗಳೇ ತನ್ನ ಸುಖಗಳೆಂದು ತಿಳಿಯುತ್ತಾನೆ. ಆದರೆ, ಎಲ್ಲರನ್ನೂ ಸಮನಾಗಿ ತಿಳಿಯುವುದೆಂದರೆ, ಎಲ್ಲರೊಡನೆ ಆತನು ಇಡುವ ಆಚರಣೆಯ ಸಮವೆಂದು ತಿಳಿಯಬಾರದು. ನ್ಯಾಯಾಧೀಶನು ದುಷ್ಟರನ್ನು ಶಿಕ್ಷಿಸುವುದು ಆತನ ಹಿತಕ್ಕಾಗಿಯೇ ಹೇಗೋ ಹಾಗೆಯೇ ಭಕ್ತನು ಭಕ್ತರೊಡನೆ ಮಿತ್ರತ್ವದಿಂದಲೂ ಅಭಕ್ತರೊಡನೆ ದ್ವೇಷದಿಂದಲೂ ಇರುತ್ತಾನೆ. ಹೀಗೆ ಅಭಕ್ತನನ್ನು ದ್ವೇಷಿಸುವುದೂ ಆತನ ಹಿತಕ್ಕಾಗಿಯೇ ಇರುತ್ತದೆ.

ಹೀಗೆ, ಧ್ಯಾನಯೋಗವನ್ನು ಹೇಳಿದಬಳಿಕ ಕೊನೆಗೆ ಅರ್ಜುನನ ಸಣ್ಣದೊಂದು ಶಂಕೆಗೆ ಉತ್ತರಕೊಡಲ್ಪಟ್ಟಿದೆ. ಅದೇನೆಂದರೆ,

**ಮನವೆನ್ನ ಮಾತು ಕೇಳದು ಕಾಣೋ ಗೋವಿಂದ |**
**ಮನವಗೆಲ್ಲುವ ಬಗೆ ಎನಗಿಲ್ಲ ಗೋವಿಂದ**

-ಕನಕದಾಸರು

ಎಂಬಂತೆ ಮನಸ್ಸು ಚಂಚಲವಾದುದರಿಂದ, ಧ್ಯಾನಮಾಡುವಾಗ ನಡುವೆ ಮನಸ್ಸು ಚಂಚಲವಾದರೆ ಗತಿ ಏನು? ಇತ್ತ ಆತನು ಧ್ಯಾನಯೋಗವನ್ನೂ ಕಳೆದುಕೊಳ್ಳುತ್ತಾನೆ, ಇತ್ತ ಮಿಕ್ಕ ಸುಖವನ್ನೂ ಕಳೆದುಕೊಳ್ಳುತ್ತಾನಲ್ಲಾ, ಎಂದರೆ ಹಾಗೇನೂ ಇಲ್ಲ. ಹಿಂದಕ್ಕೆ ಕರ್ಮಯೋಗವನ್ನು ಮಾಡುವ ಮನುಷ್ಯನು ನಡುವೆ ನಿಂತುಬಿಟ್ಟರೆ ಅದರಿಂದ ಆತನಿಗೆ ಏನೂ ಹಾನಿಯಾಗದೆ. ಹೇಗೆ ಕರ್ಮಕ್ಕೆ ತಕ್ಕ ಫಲವು ಸಿಕ್ಕುತ್ತದೆಯೆಂದು ಹೇಳಿರುವುದೋ ಹಾಗೆ ಧ್ಯಾನಯೋಗದಲ್ಲಿಯೂ

ಧ್ಯಾನವು ನಿಂತರೆ ಅದು ವ್ಯರ್ಥಹೋಗುವುದಿಲ್ಲ. ಎಲ್ಲಿಗೆ ನಿಂತಿರುವುದೋ ಅಲ್ಲಿಂದಲೇ ಮುಂದೆ ಸಾಗಲಿಕ್ಕೆ ಬರುತ್ತದೆ. ಮನಸ್ಸು ಎಷ್ಟೇ ಚಂಚಲವಾಗಿದ್ದರೂ ಅಭ್ಯಾಸದಿಂದಲೂ ವೈರಾಗ್ಯಬುದ್ಧಿಯಿಂದಲೂ ಅದನ್ನು ಬಿಗಿಹಿಡಿಯುವುದು ಶಕ್ಯವಿದೆ. ಧ್ಯಾನಯೋಗಮಾಡುವವನಿಗೆ ಧ್ಯಾನವು ಸಾಧ್ಯವಾಗದೆ ಆತನು ಸತ್ತರೂ ಕೂಡ ಪರಿವೆಯಿಲ್ಲ. ಹೀಗೆ ಧ್ಯಾನಭ್ರಷ್ಟನಾದವನು ಮುಂದಿನ ಜನ್ಮದಲ್ಲಿ ಪರಿಶುದ್ಧರಾದ ಶ್ರೀಮಂತರ ಮನೆಯಲ್ಲಿಯಾಗಲಿ ಅಥವಾ ಯೋಗಿಗಳ ಕುಲದಲ್ಲಾಗಲಿ ಹುಟ್ಟುತ್ತಾನೆ. ಪೂರ್ವಜನ್ಮ ಸಂಸ್ಕಾರದಿಂದ ಆತನಿಗೆ ಪುನಃ ಧ್ಯಾನಯೋಗವನ್ನು ಕೈಕೊಳ್ಳುವ ಬುದ್ಧಿಯುಂಟಾಗುತ್ತದೆ. ಮತ್ತು ಪುನಃ ಆತನು ಅದನ್ನು ಕೈಕೊಂಡು ಸಿದ್ಧಿಯನ್ನು ಪಡೆಯುತ್ತಾನೆ.

ಒಟ್ಟಿಗೆ, ತಪಸ್ವಿಗಳಿಗಿಂತಲೂ ಕೇವಲ ಬೌದ್ಧಿಕ ಜ್ಞಾನಿಗಳಿಗಿಂತಲೂ ಕರ್ಮಯೋಗಿಗಳಿಗಿಂತಲೂ ಧ್ಯಾನಯೋಗಿಯು ಹೆಚ್ಚಿನವನು.

೧೧ನೆಯ ಪ್ರಕರಣ

( ೭ನೆಯ ಅಧ್ಯಾಯದ ತಾತ್ಪರ್ಯ )

# ಜ್ಞಾನವಿಜ್ಞಾನಗಳು

ಮೊದಲಿನ ಆರು ಅಧ್ಯಾಯಗಳದೊಂದು ಗುಂಪು. ಇದರಲ್ಲಿ ಜ್ಞಾನಸಾಧನಗಳು ಹೇಳಲ್ಪಟ್ಟಿವೆ. ಎರಡನೆಯ ಆರು ಅಧ್ಯಾಯಗಳದು ಮತ್ತೊಂದು ಗುಂಪು. ಇದರಲ್ಲಿ ಜ್ಞೇಯವಸ್ತುವಾದ ಭಗವಂತನ ಮಾಹಾತ್ಮ್ಯವು ಹೇಳಲ್ಪಟ್ಟಿದೆ. ಜ್ಞಾನಸಾಧನಗಳಲ್ಲಿ ಕರ್ಮಯೋಗ, ಜ್ಞಾನಯೋಗ, ಧ್ಯಾನಯೋಗ ಮುಂತಾಗಿ ವಿಷಯಗಳನ್ನು ಒಡೆದು ಹಾಕಲಿಕ್ಕೆ ಬರುವಂತೆ ಇಲ್ಲಿ ವಿಷಯಗಳನ್ನು ಒಡೆದು ಹಾಕುವುದು ಶಕ್ಯವಿಲ್ಲ. ಏಕೆಂದರೆ ಪರಮಾತ್ಮನ ಮಾಹಾತ್ಮ್ಯಜ್ಞಾನವು ಅಖಂಡವು. ಆದರೂ ಒಂದೊಂದು ಅಧ್ಯಾಯದಲ್ಲಿ ಒಂದೊಂದು ದೃಷ್ಟಿಯಿಂದ ಆ ಮಾಹಾತ್ಮ್ಯಜ್ಞಾನವು ಪುಷ್ಟೀಕರಿಸಲ್ಪಟ್ಟಿದೆ. ೭ನೆಯ ಅಧ್ಯಾಯದಲ್ಲಿ ಜ್ಞೇಯ ವಸ್ತುವು ಯಾವುದು, ಆ ಸಂಬಂಧವಾಗಿ ತಿಳಿಯತಕ್ಕ ವಿಶೇಷ ವಿಷಯಗಳು ಯಾವುವು ಎಂದರೆ ಆತನ ಜ್ಞಾನವಿಜ್ಞಾನಗಳು ಯಾವುವು ಎಂಬುದು ಹೇಳಲ್ಪಟ್ಟಿದೆ. ಎಂಟನೆಯ ಅಧ್ಯಾಯದಲ್ಲಿ ಆ ತಿಳಿಯತಕ್ಕ ವಸ್ತುಗಳ ವ್ಯಾಖ್ಯೆಗಳು ಕೊಡಲ್ಪಟ್ಟಿವೆ. ೯ನೆಯ ಅಧ್ಯಾಯದಲ್ಲಿ ಆ ಪರಮಾತ್ಮನ ಸಂಬಂಧವಾಗಿ ತಿಳಿಯತಕ್ಕ ಮುಖ್ಯ ಸಿದ್ಧಾಂತಗಳು ಯಾವುವು ಎಂಬುದು ಹೇಳಲ್ಪಟ್ಟಿದೆ. ೧೦ನೆಯದರಲ್ಲಿ ಆತನ ವಿಭೂತಿಗಳು ಯಾವುವು ಎಂಬುದು ಹೇಳಿದೆ. ೧೧ನೆಯದರಲ್ಲಿ ವಿಶ್ವರೂಪದರ್ಶನವು ಬಂದಿದೆ. ೧೨ನೆಯದರಲ್ಲಿ ಭಕ್ತಿಯೇ ಹೆಚ್ಚಿನ ಸಾಧನವೆಂದು ಹೇಳಿ, ಆತನ ಮಹಿಮೆಯು ಪುಷ್ಟೀಕರಿಸಲ್ಪಟ್ಟಿದೆ. ಹೀಗೆ ಒಂದೇ ವಿಷಯದ ವಿವೇಚನೆಯು ಬೇರೆ ಬೇರೆ ದೃಷ್ಟಿಯಿಂದ ಮಾಡಲ್ಪಟ್ಟಿದೆ.

೭ನೆಯ ಅಧ್ಯಾಯದಲ್ಲಿ ಹೊಸ ವಿಷಯಕ್ಕೆ ಪ್ರಾರಂಭವಾಗಿರುತ್ತದೆಂಬುದು ಅದರ ಪ್ರಾರಂಭಕ್ಕಿರುವ ಪ್ರತಿಜ್ಞೆಯಿಂದಲೇ ಗೊತ್ತಾಗುತ್ತದೆ. ಹಿಂದಿನ ಅಧ್ಯಾಯಗಳಲ್ಲಿ ಹೇಳಿದ ಜ್ಞಾನಸಾಧನಗಳಿಂದ ಪ್ರಾಪ್ತವಾಗತಕ್ಕದ್ದೇನು? ಪರಮಾತ್ಮನ ಜ್ಞಾನವು. ಆ ಜ್ಞಾನವು ಯಾವುದೆಂಬುದು ವಿಜ್ಞಾನಸಹಿತವಾಗಿ ಈ ಅಧ್ಯಾಯದಲ್ಲಿ ಹೇಳಲ್ಪಟ್ಟಿರುವುದು. ಹಿಂದಕ್ಕೆ ಪರಮಾತ್ಮನ ಜ್ಞಾನವು ತೀರ ಬಂದಿಲ್ಲವೆಂತಲ್ಲ. ಅಲ್ಲಲ್ಲಿ ಬಂದೇ ಇದೆ. ಆದರೆ ಅಲ್ಲಿ ಜ್ಞಾನಸಾಧನಗಳನ್ನು ಹೇಳುವುದೇ ಮುಖ್ಯ ವಿಷಯವಾಗಿದ್ದು ಆನುಷಂಗಿಕವಾಗಿ ಜ್ಞಾನದ ವಿಷಯವು ಬಂದಿದೆ. ಉದಾ-೨ನೆಯ ಅಧ್ಯಾಯದಲ್ಲಿ, ಆತ್ಮಾನಾತ್ಮ ವಿವೇಕ ಜ್ಞಾನವು ಬಂದಿದೆ.

ಯುದ್ಧದಲ್ಲಿ ಸ್ವಜನರು ಸತ್ತರೆ ಏಕೆ ಅಳಬಾರದೆಂಬುದಕ್ಕೆ ಆ ಜ್ಞಾನವನ್ನು ಕೊಡುವುದು ಅವಶ್ಯವಿದ್ದ ಕಾರಣ ಅಷ್ಟರಮಟ್ಟಿಗೆ ಕೊಡಲ್ಪಟ್ಟಿದೆ. ಅನೇಕ ಕಡೆಗೆ ಕರ್ಮಯೋಗ ಧ್ಯಾನಯೋಗಗಳಿಂದ ಉಂಟಾಗತಕ್ಕ ಜ್ಞಾನವು ಎಂಥದು, ಮತ್ತು ಅಂಥ ಜ್ಞಾನದಿಂದ ದೊರೆಯತಕ್ಕ ಫಲವು ಯಾವುದು ಎಂಬುದು ಹೇಳಲ್ಪಟ್ಟಿರುವುದು. ಕರ್ಮಯೋಗ ಧ್ಯಾನಯೋಗಗಳು ಜ್ಞಾನಕ್ಕೆ ಸಾಧನಗಳು; ಅಂದರೆ ಜ್ಞಾನವೇ ಅವಕ್ಕೆ ಫಲ; ಜ್ಞಾನದ ಫಲವು ಮೋಕ್ಷ; ಅದೇ ಪರಮಪುರುಷಾರ್ಥ. ಇವೆರಡು ಸಿದ್ಧಾಂತಗಳು ಅಲ್ಲಲ್ಲಿ ಬಂದಿವೆ. ಆದರೆ ಆ ಜ್ಞಾನದ ಸ್ವರೂಪವು ವಿಸ್ತಾರವಾಗಿ ಹೇಳಲ್ಪಟ್ಟಿಲ್ಲ. ಇಲ್ಲಿ ಅದು ವಿಸ್ತಾರವಾಗಿ ಹೇಳಲ್ಪಡುತ್ತದೆ.

ಪರಮಾತ್ಮನ ವಿಷಯವಾಗಿ ತಿಳಿಯತಕ್ಕ ಮುಖ್ಯ ವಿಷಯವು ಯಾವುದೆಂದರೆ, ಆತನ ಸೃಷ್ಟಿಕ್ರಮ. ಪರಮಾತ್ಮನು ತನ್ನ ಅಧೀನದಲ್ಲಿರುವ ಎರಡು ಪ್ರಕೃತಿಗಳ ಮೂಲಕವಾಗಿ ಜಗತ್ತಿನ ಸೃಷ್ಟಿಯನ್ನು ಮಾಡುತ್ತಾನೆ. ಒಂದು ಅಚೇತನ ಪ್ರಕೃತಿ ಅಥವಾ ಅಪರಾ ಪ್ರಕೃತಿ, ಮತ್ತೊಂದು ಚೇತನ ಪ್ರಕೃತಿ ಅಥವಾ ಪರಾಪ್ರಕೃತಿ. ಅಚೇತನ ಪ್ರಕೃತಿಯು ಭೂಮಿ, ಆಪ, ಅನಲ, ವಾಯು ಆಕಾಶ ಎಂಬ ಪಂಚಮಹಾಭೂತಗಳು, ಮನಸ್ಸು, ಬುದ್ಧಿತತ್ವ ಮತ್ತು ಅಹಂಕಾರತತ್ವ (ಇದರಲ್ಲಿಯೇ ಅದಕ್ಕೆ ಕಾರಣವಾದ ಮಹಾ ತತ್ವವು ಸೇರಿದೆ) -ಹೀಗೆ ಅಷ್ಟವಿಧವಾಗಿದೆ. ಈ ಅಚೇತನ ಪ್ರಕೃತಿಯನ್ನು ಧಾರಣಮಾಡುವವಳು ಚೇತನ ಪ್ರಕೃತಿಯು. ಇವೆರಡು ಪ್ರಕೃತಿಗಳೇ ಯಾವತ್ತು ಪ್ರಾಣಿಗಳು ಹುಟ್ಟುವುದಕ್ಕೆ ಕಾರಣಗಳು. ಆದರೆ ಅವು ಸ್ವತಂತ್ರ ಕಾರಣಗಳಲ್ಲ; ಪರಮಾತ್ಮನೇ ಸ್ವತಂತ್ರಕಾರಣನು. ನಿಜವಾಗಿ ಆತನೇ ಜಗತ್ತಿನ ಹುಟ್ಟಿಗೂ ಸಾವಿಗೂ ಮೂಲಕಾರಣನು. ಆತನಿಗಿಂತ ಹೆಚ್ಚಿನ ವಸ್ತುವೇ ಇಲ್ಲ.

**ಇವೆಲ್ಲ ತನ್ನಾಧೀನವಲ್ಲದೆ | ಅವರಾಧೀನ ತಾನಲ್ಲ ನೋಡಾ**

-ವಚನಶಾಸ್ತ್ರ

ಅಂದರೆ ಆತನೇ ಸರ್ವೋತ್ತಮನು. ಸೂತ್ರದಲ್ಲಿ ಮಣಿಗಳು ಪೋಣಿಸಲ್ಪಟ್ಟಂತೆ ಈ ಜಗತ್ತೆಲ್ಲವೂ ಆತನಲ್ಲಿ ಓತಪ್ರೋತವಾಗಿದೆ. ಇದೇ ಪರಮಾತ್ಮನ ವಿಷಯವಾಗಿ ತಿಳಿಯತಕ್ಕ ಮುಖ್ಯ ಜ್ಞಾನವು.

**ಪ್ರಕೃತಿಯ ಮೂಲಕಾರಣವನು ಮಾಡಿ |**
**ಸಕಲ ತತ್ವಗಳ ಸಮೂಹದಿ ಕೂಡಿ |**
**ವಿಕಳಿಸದಂತೆ ತನ್ಮಾತ್ರೆಯ ಹೂಡಿ |**
**ಅಖಿಳೇಶ ಮಹತ್ತತ್ವಗಳ ನಿರ್ಮಿಸಿದೆ ಜೋಜೋ ||**

-ವಾದಿರಾಜ ಸ್ವಾಮಿಗಳು

ಇನ್ನು ಆತನ ಸಂಬಂಧವಾಗಿ ತಿಳಿಯತಕ್ಕ ವಿಶೇಷ ಸಂಗತಿಗಳು ಕೆಲವು ಇವೆ. ಅವಕ್ಕೆ ವಿಜ್ಞಾನವೆನ್ನುತ್ತಾರೆ. ಅವು ಯಾವುವೆಂದರೆ, ಆತನು ಆಯಾ ಪದಾರ್ಥಗಳ ಸೃಷ್ಟಿಗೆ ಮಾತ್ರವೇ ಕಾರಣನೆಂತಲ್ಲ, ಆಯಾ ಪದಾರ್ಥಗಳ ಸ್ವಭಾವಧರ್ಮಗಳಿಗೂ ಅವುಗಳ ಸಾರಗಳಿಗೂ ಕೂಡ ಆತನು ವಿಶೇಷದಿಂದ ಕಾರಣನು; ಮತ್ತು ನಿಯಾಮಕನು. ಹಾಗೆಯೇ ಆತನು ಆ ಸಾರಭೂತವಾದವುಗಳನ್ನು ಭೋಗಿಸತಕ್ಕವನು. ಹೀಗೆಂದರೇನೆಂಬುದನ್ನು ಕೆಲವು ಉದಾಹರಣೆಗಳಿಂದ ಸ್ಪಷ್ಟಮಾಡುತ್ತೇವೆ. ನೀರಿನಲ್ಲಿಯ ರಸನು ಪರಮಾತ್ಮನು. ಎಂದರೆ ಏನು? ಹಾಗೆಂದರೆ ನೀರಿನಲ್ಲಿ ಅನೇಕ ಧರ್ಮಗಳಿರುತ್ತವೆ. ನೀರಿನಲ್ಲಿ ರಸವಿದೆ, ಸಂಖ್ಯೆಯೆಂಬ ಧರ್ಮವಿದೆ, ಪ್ರಕಾಶಧರ್ಮವೂ ಇದೆ. ಹೀಗೆ ನೀರಿನಲ್ಲಿ ಅನೇಕ ಧರ್ಮಗಳಿರುತ್ತವೆ. ಆದರೆ ಅವೆಲ್ಲವುಗಳಲ್ಲಿ ರಸವೇ ಮುಖ್ಯ ಧರ್ಮವು. ನೀರಿನಲ್ಲಿ ನೀರತ್ವವುಂಟಾಗುವುದಕ್ಕೆ ಅದೇ ಕಾರಣವು, ಅಂದರೆ, ರಸವು ನೀರಿನ ಸ್ವಭಾವಧರ್ಮವು. ಆ ಸ್ವಭಾವಧರ್ಮವನ್ನು ಅದಕ್ಕೆ ಕೊಡುವುದಕ್ಕೆ ಪರಮಾತ್ಮನೇ ಕಾರಣನು. ಅದೇ ಮೇರೆಗೆ ಆ ರಸಧರ್ಮದ ರಸತ್ವಕ್ಕೂ ಕೂಡ ಆತನೇ ಕಾರಣನು. ಹಾಗೆಯೇ ಮಿಕ್ಕ ಧರ್ಮಗಳಿಗಿಂತ ನೀರಿನಲ್ಲಿಯ ರಸಧರ್ಮಕ್ಕೇನೇ ಶ್ರೇಷ್ಠತ್ವ ಬರುವುದಕ್ಕೂ ಆತನೇ ಕಾರಣ, ಎಂದರೆ ರಸವೇ ನೀರಿನಲ್ಲಿಯ ಸಾರಭೂತವಾದ ಧರ್ಮವಾಗುವುದಕ್ಕೂ ಆತನೇ ಕಾರಣನು. ಇದಲ್ಲದೆ, ಆತನು ಮಿಕ್ಕ ಧರ್ಮಗಳಿಗಿಂತಲೂ ಆ ರಸವನ್ನೇ ಹೆಚ್ಚಾಗಿ ಭೋಗಿಸುವವನು. ಅದಕ್ಕೆ ನಿಯಾಮಕನೂ ಆತನು. ಆತನಲ್ಲಿ, ಈ ಪ್ರಕಾರವಾಗಿ ಮಿಕ್ಕವರಿಗೆ ಇರುವದಕ್ಕಿಂತಲೂ ವಿಲಕ್ಷಣವಾದ ಶಕ್ತಿಯಿರುತ್ತದೆ. ಭೌತಿಕಶಾಸ್ತ್ರಜ್ಞನು ಆಕ್ಸಿಜನ್ ಮತ್ತು ಹೈಡ್ರೋಜನ ಕೂಡಿಸಿ ನೀರನ್ನು ಮಾಡಿ ತೋರಿಸಬಲ್ಲನು. ಆದರೆ ಆ ನೀರಿನಲ್ಲಿರುವ ರಸವನ್ನು ಹುಟ್ಟಿಸುವ ಶಕ್ತಿಯು ಆತನಿಗೆ ಇದೆಯೇ? ಇಲ್ಲ, ಅದೇ ಮೇರೆಗೆ ಆ ರಸತ್ವವನ್ನು ಹುಟ್ಟಿಸುವ ಶಕ್ತಿಯು ಆತನಿಗೆ ಇದೆಯೇ? ಇಲ್ಲ. ನೀರಿನಲ್ಲಿರುವ ಮಿಕ್ಕ ಯಾವತ್ತು ಧರ್ಮಗಳಿಗಿಂತಲೂ ಆ ರಸತ್ವಧರ್ಮವನ್ನೇ ಶ್ರೇಷ್ಠ ಧರ್ಮವನ್ನಾಗಿ ಮಾಡುವ ಶಕ್ತಿಯು ಆತನಿಗೆ ಉಂಟೋ? ಇಲ್ಲ. ಸಾರಾಂಶ, ಆತನು ಅದಕ್ಕೆ ಕಾರಣನೂ ಅಲ್ಲ, ನಿಯಾಮಕನೂ ಅಲ್ಲ, ಪ್ರೇರಕನೂ ಅಲ್ಲ, ಭೋಕ್ತೃವೂ ಅಲ್ಲ. ನಮನಿಮಗೆ ಅಗೋಚರವಾದ ಸೂಕ್ಷ್ಮ ರಸವೊಂದು ನೀರಿನಲ್ಲಿ ಇರುತ್ತದೆ. ಅದನ್ನು ಭೋಗಿಸುವವನು ಪರಮಾತ್ಮನು. ಹೀಗೆ ನಾನಾವಿಧದಿಂದ ಆತನಲ್ಲಿ ಮಿಕ್ಕವರಿಗಿಂತ ಹೆಚ್ಚಿನ ಶಕ್ತಿಯಿದೆ. ಮತ್ತೊಂದು ಉದಾಹರಣೆಯನ್ನು ತೆಗೆದುಕೊಳ್ಳುವ. ಒಂದು ವಸ್ತ್ರವನ್ನು ನೇಕಾರನು ನೇಯುತ್ತಾನೆಂದು ತಿಳಿಯಿರಿ. ಆಗ ಆತನಿಗೆ ನಾವು ಆತನು ಆ ವಸ್ತ್ರವನ್ನು ಹುಟ್ಟಿಸದವನೆಂದು ಅನ್ನುತ್ತೇವೆ. ಪರಮಾತ್ಮನು ಈ ಪ್ರಕಾರದ ಕರ್ತನು ಮಾತ್ರವೇ ಅಲ್ಲ. ಆತನಲ್ಲಿ ಹೆಚ್ಚಿನ ಕರ್ತೃತ್ವ ಶಕ್ತಿಯಿರುತ್ತದೆ. ನೇಕಾರನು ನೂಲಿನಲ್ಲಿರುವ ನೂಲತ್ವ ಧರ್ಮವನ್ನು

ಹುಟ್ಟಿಸಲಾಪನೋ? ಹುಟ್ಟಿಸಲಾರ. ಅದನ್ನು ಹುಟ್ಟಿಸುವವನು ಪರಮಾತ್ಮನು. ಆ ವಸ್ತ್ರದಲ್ಲಿ ಒಂದು ಪ್ರಕಾರದ ಗಂಧವಿರುತ್ತದೆ, ರಸವಿರುತ್ತದೆ. ಅವೆಲ್ಲ ಧರ್ಮಗಳನ್ನು ಆತನು ಹುಟ್ಟಿಸಬಲ್ಲನೆ? ಇಲ್ಲ. ಪರಮಾತ್ಮನು ರಸದಲ್ಲಿದ್ದು ರಸವನ್ನು ಭೋಗಿಸುತ್ತಾನೆ, ಮತ್ತು ಪ್ರೇರಿಸುತ್ತಾನೆ. ಆದಕಾರಣ ಆತನೇ ರಸನೆಂದು ಹೇಳಿಕೊಳ್ಳಲ್ಪಡುತ್ತಾನೆ. ಈ ರಸಾದಿ ಮುಖ್ಯ ಧರ್ಮಗಳು ಪರಮಾತ್ಮನ ಪ್ರತೀಕಗಳು. ಅಂದರೆ ಅವು ಉಪಾಸನೆಗೆ ಪ್ರತಿಮಾರೂಪವಾದವುಗಳು. ನೀರಿನಲ್ಲಿ ಪರಮಾತ್ಮನನ್ನು ಉಪಾಸನೆಮಾಡುವುದಕ್ಕಿಂತಲೂ ರಸದಲ್ಲಿ ಉಪಾಸನೆಮಾಡುವುದು ಹೆಚ್ಚಿನದು. ಹೀಗೆ ನಾನಾಕಾರಣಗಳಿಂದ ಈ ರಸಾದಿಗಳು ಆತನೇ ಎಂದೆನ್ನಿಸಿಕೊಳ್ಳಲ್ಪಡುತ್ತವೆ.

ಗೀತೆಯಲ್ಲಿ, ಈ ಅಧ್ಯಾಯದಲ್ಲಿ ಒಟ್ಟಿಗೆ ೧೩-೧೪ ಉದಾಹರಣೆಗಳನ್ನು ಕೊಟ್ಟು ಆತನ ಅಲೌಕಿಕ ಮಹಿಮೆಯು ಅಂದರೆ ವಿಜ್ಞಾನವು ಹೇಳಲ್ಪಟ್ಟಿದೆ. ಅವು ಯಾವವೆಂದರೆ (೧) ನೀರಿನಲ್ಲಿಯ ರಸನು ಆತನು, (೨) ಚಂದ್ರಸೂರ್ಯರುಗಳಲ್ಲಿರುವ ಪ್ರಭೆಯು ಆತನು, (೩) ವೇದಗಳಲ್ಲಿಯ ಪ್ರಣವನು ಆತನು (೪) ಆಕಾಶದಲ್ಲಿಯ ಶಬ್ದನು ಆತನು (೨೫) ನರರಲ್ಲಿರುವ ಪೌರುಷನು ಆತನು (೬) ಪೃಥ್ವಿಯಲ್ಲಿ ಇರುವ ಪುಣ್ಯ ಗಂಧನು ಆತನು (೭) ಅಗ್ನಿಯಲ್ಲಿರುವ ತೇಜಸ್ಸು ಆತನು (೮) ಸರ್ವ ಪ್ರಾಣಿಗಳಲ್ಲಿರುವ ಜೀವನನು ಆತನು. (೯) ಸರ್ವಪ್ರಾಣಿಗಳಿಗೆ ಆತನು ಸನಾತನವಾದ ಬೀಜನು (೧೦) ಬುದ್ಧಿವಂತರಲ್ಲಿರುವ ಬುದ್ಧಿಯು ಆತನು (೧೧) ತೇಜಸ್ವಿಗಳಲ್ಲಿರುವ ತೇಜಸ್ಸು ಆತನು. (೧೨) ಬಲವಂತರಲ್ಲಿರುವ ಕಾಮರಾಗ ವರ್ಜಿತವಾದ ಬಲನು ಆತನು. ( ೧೩) ಪ್ರಾಣಿಗಳಲ್ಲಿ ಧರ್ಮಕ್ಕೆ ಅವಿರುದ್ಧವಾಗಿರುವ ಕಾಮನು ಆತನು. ಒಟ್ಟಿನಲ್ಲಿ ಹೇಳುವುದೇನೆಂದರೆ, ಜಗತ್ತಿನಲ್ಲಿರುವ ಸಾತ್ವಿಕ ರಾಜಸ ತಾಮಸ ಪದಾರ್ಥಗಳೆಲ್ಲವೂ ಆತನಿಂದಲೇ ಹುಟ್ಟಿರುತ್ತವೆ. ಅವೆಲ್ಲವೂ ಆತನ ಅಧೀನದಲ್ಲಿಯೇ ಇರುತ್ತವೆ. ಸೂತ್ರದಲ್ಲಿ ಮಣಿಗಳು ಪೋಣಿಸಲ್ಪಟ್ಟಂತೆ ಅವೆಲ್ಲವೂ ಆತನ ಆಧಾರದಿಂದ ನಿಂತಿವೆ. ಆದರೆ ಅವುಗಳ ವಶದಲ್ಲಿ ಪರಮಾತ್ಮನು ಇಲ್ಲ, ಆತನ ವಶದಲ್ಲಿ ಅವು ಇರುತ್ತವೆ.

ಇದರಿಂದ ಆತನು ಸ್ವತಃ ಇವೆಲ್ಲ ಸಾತ್ವಿಕ ರಾಜಸ ಗುಣಗಳನ್ನು ಏರಿದವನು ಎಂಬುದು ಗೊತ್ತಾಗುತ್ತದೆ. ಸ್ವತಃ ಆತನು ಸಾತ್ವಿಕನೂ ಅಲ್ಲ, ರಾಜಸನೂ ಅಲ್ಲ, ತಾಮಸನೂ ಅಲ್ಲ. ಅವೆಲ್ಲ ಗುಣಗಳನ್ನು ಮೀರಿ ನಿಂತವನು; ಅವನ್ನು ಹುಟ್ಟಿಸಿದವನು, ಅವುಗಳಿಗೆ ಪ್ರೇರಕನು. ಆದರೂ ಜನರು, ಆತನು ನಮ್ಮನಿಮ್ಮಂತೆಯೇ ಸಗುಣನೆಂದು ತಿಳಿಯುತ್ತಾರಲ್ಲವೇ? ಅದಕ್ಕೇನು ಕಾರಣ? ಅದಕ್ಕೇನೂ ಕಾರಣವಿಲ್ಲ. ಮೋಹವೇ ಕಾರಣ. ಆ ತ್ರಿಗುಣಗಳಿಗೆ ಅಭಿಮಾನಿಯಾದ ದುರ್ಗಾದೇವಿಯಿಂದ ಜಗತ್ತೆಲ್ಲವೂ ಮೋಹಿತವಾಗಿರುತ್ತದೆ. ಆದಕಾರಣವೇ ಜಗತ್ತು ಸಹಸಾ ಪರಮಾತ್ಮನನ್ನು ತಿಳಿಯುವುದಿಲ್ಲ. ಆತನಿಗೆ ಶರಣುಹೋದವರು ಮಾತ್ರ ಆ ಮಾಯೆಯನ್ನು

ದಾಟಬಲ್ಲರು. ನರಾಧಮರು ತಾಮಸ ಜೀವಿಗಳು. ಅವರು ಆತನಿಗೆ ಶರಣುಹೋಗುವುದೇ ಇಲ್ಲ, ಆತನಿಗೆ ಶರಣು ಹೋಗುವವರಲ್ಲಿಯೂ ಅನೇಕ ಪ್ರಕಾರದ ಜನರು ಇರುತ್ತಾರೆ. ಕೆಲವರು ರೋಗ, ದುಃಖ ಮುಂತಾದವುಗಳಿಂದ ಪೀಡಿತರಾದಾಗ ಆತನಿಗೆ ಮೊರೆ ಹೋಗುತ್ತಾರೆ, ಕೆಲವರು ಆತನನ್ನು ತಿಳಿದುಕೊಳ್ಳುವ ಕುತೂಹಲವುಳ್ಳವರಾಗಿ ಆತನಿಗೆ ಶರಣುಹೋಗುತ್ತಾರೆ, ಕೆಲವರು ತಮಗೆ ಧನಕನಕಾದಿಗಳು ದೊರೆಯಬೇಕೆಂದು, ಅಥವಾ ತಮ್ಮ ವಾಂಛಿತಾರ್ಥವು ಪೂರ್ಣವಾಗಬೇಕೆಂದು ಶರಣುಹೋಗುತ್ತಾರೆ. ಮತ್ತೆ ಕೆಲವರು ಜ್ಞಾನಿಗಳು ಆತನಿಗೆ ಶರಣುಹೋಗುವುದು ತಮ್ಮ ಕರ್ತವ್ಯವೆಂದು ಆತನಿಗೆ ಮೊರೆ ಹೋಗುತ್ತಾರೆ. ಇವರೆಲ್ಲರೂ ಆತನ ಭಕ್ತರೇ. ಆದರೆ ಇವರೆಲ್ಲರಲ್ಲಿ ಜ್ಞಾನಿಯು ಶ್ರೇಷ್ಠ ಭಕ್ತನು. ಏಕೆಂದರೆ, ಆತನು ಪರಮಾತ್ಮನನ್ನು ಪಡೆದು ಮುಕ್ತನೇ ಆಗುವನು. ಹೀಗೆ ಎಲ್ಲವೂ ವಾಸುದೇವನ ಅಧೀನವೆಂಬ ಜ್ಞಾನವುಂಟಾಗುವ ಮಹಾತ್ಮರು ಬಹಳ ದುರ್ಲಭರು.

**’ಅ’ ಮೊದಲು ’ಕ್ಷ’ ಕಾರಾಂತ ಈ ಮಹಾವರ್ಣಗಳೆಲ್ಲ**
**ಸ್ವಾಮಿಯಾದ ವಿಷ್ಣುವಿನ ನಾಮವೆಂದು ತಿಳಿದವರಿಗೆ**

-ವಿಜಯದಾಸರು

ಮುಕ್ತಿಯು ದುರ್ಲಭವಲ್ಲ. ಮಿಕ್ಕವರೆಲ್ಲರೂ ಮಿಕ್ಕ ಇಚ್ಛೆಗಳನ್ನಿಟ್ಟುಕೊಂಡು, ಅನ್ಯದೇವತೆಗಳನ್ನು ಪೂಜಿಸುವರು. ಅವರೇ ಬಹಳಜನ. ಅವರು ಯಾವದೇವತೆಗಳನ್ನು ಪೂಜಿಸುತ್ತಾರೋ ಆ ದೇವತೆಗಳಲ್ಲಿಯೇ ಭಕ್ತಿಯು ಕೂಡುತ್ತದೆ. ಮತ್ತು ಆ ದೇವತೆಗಳ ಮೂಲಕವಾಗಿ ಅವರ ಆರಾಧನೆಗೆ ದೊರೆಯತಕ್ಕ ಫಲ ದೊರೆಯುತ್ತದೆ. ಆದರೆ ಆ ಫಲಕ್ಕೆ ಕೊನೆಯುಂಟು. ಅವರು ಪರಮಾತ್ಮನು ಅವ್ಯಕ್ತನು, ಆತನೇ ಆ ದೇವತೆಗಳ ವ್ಯಕ್ತವಾದ ಶರೀರಗಳನ್ನು ಧಾರಣಮಾಡಿರುವನೆಂಬುದನ್ನು ತಿಳಿಯುವುದಿಲ್ಲ. ಪರಮಾತ್ಮನು ಸರ್ವರಿಗೂ ಪ್ರಕಾಶಿತನಾಗುವುದಿಲ್ಲ. ಪರಮಾತ್ಮನು ಭೂತ ಭವಿಷ್ಯ ವರ್ತಮಾನಗಳನ್ನು ಬಲ್ಲವನು. ಆತನನ್ನು ಮಾತ್ರ ಯಾರೂ ಸಂಪೂರ್ಣವಾಗಿ ಅರಿಯರು. ಅವರ ಅಜ್ಞಾನಕ್ಕೆ ಹಿಂದೆ ಹೇಳಿದಂತೆ ತ್ರಿಗುಣಾಭಿಮಾನಿಯಾದ ದುರ್ಗಾದೇವಿಯು ಮಾತ್ರವೇ ಕಾರಣವಲ್ಲ, ಇಚ್ಛಾದ್ವೇಷಾದಿಗಳಿಂದ ಹುಟ್ಟಿದ ಸುಖದುಃಖಾದಿ ವ್ಯಾಮೋಹವೂ ಅವಾಂತರ ಕಾರಣವು. ಪುಣ್ಯ ಕರ್ಮಗಳನ್ನು ಮಾಡುವವರು ಪಾಪಗಳನ್ನೆಲ್ಲ ಕಳೆದುಕೊಂಡವರಾಗಿ ಶ್ರದ್ಧೆಯುಕ್ತರಾಗಿ ಜರಾಮರಣದಿಂದ ಬಿಡುಗಡೆಹೊಂದುವುದಕ್ಕೆ ಪರಮಾತ್ಮನನ್ನು ಭಜಿಸುತ್ತಾರೆ. ಆಗ ಅವರಿಗೆ ಆ ಬ್ರಹ್ಮನು ಯಾರು, ಅಧ್ಯಾತ್ಮವೆಂದರೇನು ಕರ್ಮವೆಂದರೇನು ಎಂಬುದು ಗೊತ್ತಾಗುತ್ತದೆ. ಪರಮಾತ್ಮನು

ಸಾಧಿಭೂತನು, ಸಾಧಿದೈವನು ಸಾಧಿಯಜ್ಞನು, ಎಂದು ತಿಳಿದವರು ಮತ್ತು ಪ್ರಯಾಣಕಾಲದಲ್ಲಿ ಕೂಡ ಆತನ ಸ್ಮರಣೆಯುಳ್ಳವರು ನಿಜವಾದ ಜ್ಞಾನಿಗಳು.

೧೨ನೆಯ ಪ್ರಕರಣ

(೮ನೆಯ ಅಧ್ಯಾಯದ ತಾತ್ಪರ್ಯ)

# ವ್ಯಾಖ್ಯೆಗಳು, ಅಂತಕಾಲಸ್ಮರಣಫಲ-ಬ್ರಹ್ಮಪ್ರಾಪ್ತಿಮಾರ್ಗ

ಏಳನೆಯ ಅಧ್ಯಾಯದ ಕೊನೆಗೆ ಮೋಕ್ಷವನ್ನು ಪಡೆಯಲಿಚ್ಛಿಸುವವನು ಬ್ರಹ್ಮ ಅಧ್ಯಾತ್ಮ ಕರ್ಮ ಮುಂತಾದವುಗಳನ್ನು ತಿಳಿಯಬೇಕೆಂದು ಹೇಳಿತು. ಈ ೮ನೆಯ ಅಧ್ಯಾಯದಲ್ಲಿ ಮೊದಲು ಅವುಗಳ ವ್ಯಾಖ್ಯೆಯು ಕೊಡಲ್ಪಡುತ್ತದೆ.

## ವ್ಯಾಖ್ಯೆಗಳು

ಅರ್ಜುನನು ಎಂಟು ಪ್ರಶ್ನೆಗಳನ್ನು ಕೇಳಿರುತ್ತಾನೆ. ಅವಕ್ಕೆ ಉತ್ತರ ಹೀಗೆ ಇದೆ. (೧) ಪರಮ ಅಕ್ಷರನಾದವನು ಬ್ರಹ್ಮನು. ಎಂದರೆ ಎಲ್ಲಕ್ಕಿಂತಲೂ ಹೆಚ್ಚಿಗೆ ನಾಶರಹಿತನಾದವನು ಯಾವನೋ ಆತನೇ ಬ್ರಹ್ಮನು. (೨) ಅಧ್ಯಾತ್ಮವೆಂದರೆ ಸ್ವಭಾವವು. ಆತ್ಮನನ್ನು ಹೊಂದಿಕೊಂಡು ಆತ್ಮನಿಗೆ ಉಪಕಾರಕವಾಗಿರುವ ದೇಹ, ಇಂದ್ರಿಯ ಅಂತಃಕರಣ ಇವುಗಳಿಗೆ ಅಧ್ಯಾತ್ಮವೆಂದು ಹೆಸರು. ಅಥವಾ ಭಗವಂತನ ಸ್ವಭಾವಕ್ಕೆ ಅಧ್ಯಾತ್ಮವೆನ್ನುತ್ತಾರೆ. ಅಥವಾ ಸರ್ವದಾ ಏಕರೂಪದಿಂದಿರುವ ಜೀವರಾಶಿಯು; ಸ್ವ ಅಂದರೆ ಜೀವನ, ಭಾವ ಎಂದರೆ ಇರತಕ್ಕ ಪದಾರ್ಥಗಳು, ದೇಹೇಂದ್ರಿಯಾದಿಗಳು. (೩) ಕರ್ಮವೆಂದರೆ ಸಚೇತನ ಅಚೇತನ ಪದಾರ್ಥಗಳನ್ನೂ ಇಂದ್ರಿಯಾದಿಗಳನ್ನೂ ಹುಟ್ಟಿಸುವ ಪರಮಾತ್ಮನ ಸೃಷ್ಟಿ ಕ್ರಿಯೆಯು. ಈಶ್ವರನ ಸೃಷ್ಟಿ ವ್ಯಾಪಾರವು. (೪) ಅಧಿಭೂತವೆಂದರೆ ದೇಹಗಳಿಂದ ಯುಕ್ತರಾದ ಜೀವರನ್ನು ಹೊಂದಿಕೊಂಡಿರುವ ನಾಶವಂತ ಪದಾರ್ಥ. ಪೃಥಿವ್ಯಾದಿ ಪದಾರ್ಥಗಳು. (೫) ಅಧಿದೈವತವೆಂದರೆ ಆ ಪುರುಷನು. ಅಥವಾ ಸರ್ವ ಜೀವಾಭಿಮಾನಿಯಾದ ಸಂಕರ್ಷಣನು. ಅಥವಾ ಚತುರ್ಮುಖ ಬ್ರಹ್ಮನು. ಏಕೆಂದರೆ ಆತನು ಸರ್ವದೇವತೆಗಳಿಗೆ ಅಧಿಕನು. ಅಥವಾ ಪುರುಷ ಶಬ್ದವಾಚ್ಯಳಾದ ಲಕ್ಷ್ಮಿಯು ಅಧಿದೈವತಳು. (೬) ಅಧಿಯಜ್ಞನೆಂದರೆ ದೇಹಧಾರಣಮಾಡಿದ ಜೀವರುಗಳ ದೇಹದಲ್ಲಿ ಇರುವ ಅಧಿಯಜ್ಞನು ಪರಮಾತ್ಮನು. ಏಕೆಂದರೆ ಯಜ್ಞಕ್ಕೆ ಕರ್ತನೂ ಫಲಭೋಕ್ತನೂ ಪ್ರೇರಕನೂ ಆತನು. ಆದಕಾರಣದಿಂದ ಆತನು ಅಧಿಯಜ್ಞನು. ಒಟ್ಟಿಗೆ ಇವುಗಳ ತಾತ್ಪರ್ಯವೇನೆಂದರೆ- ಬ್ರಹ್ಮ ಅಂದರೆ ಪರಮಾತ್ಮನ ವ್ಯಾಪ್ತರೂಪವು ಪರಮ ಅಕ್ಷರವೆನ್ನಲ್ಪಡುತ್ತದೆ. ಅಧ್ಯಾತ್ಮವೆಂದರೆ ಜೀವರಾಶಿಯು, ಅಥವಾ ಜೀವನಿಗೆ ಉಪಕಾರಿಯಾದ

ದೇಹ, ಇಂದ್ರಿಯ ಅಂತಃಕರುಣಮುಂತಾದ ಪದಾರ್ಥಗಳು. ಕರ್ಮವೆಂದರೆ ಪರಮಾತ್ಮನು ಮಾಡುವ ಚರಾಚರ ಸೃಷ್ಟಿ ವ್ಯಾಪಾರವು. ಅಧಿದೈವತವೆಂದರೆ ದೇವತೆಗಳಿಗೆ ಅಧಿಪತಿಯಾದ ಚತುರ್ಮುಖಬ್ರಹ್ಮನು ಅಥವಾ ಜೀವಾಭಿಮಾನಿಯಾದ ಸಂಕರ್ಷಣನು. ಅಧಿಯಜ್ಞವೆಂದರೆ ಯಜ್ಞವನ್ನು ಉಣ್ಣುವ ವಿಷ್ಣುವು.

**ಶರಣು ಹೊಕ್ಕೆನಯ್ಯ ಎನ್ನ ಮರಣಸಮಯದಲ್ಲಿ**

**ಚರಣ ಸ್ಮರಣೆ ಕರುಣಿಸಯ್ಯಾ ನಾರಾಯಣ**

-ಕನಕದಾಸರು

(೭) ಅಂತಕಾಲದ ಕರ್ತವ್ಯವೆಂದರೆ ಪರಮಾತ್ಮನ ಸ್ಮರಣೆ. ಅದಕ್ಕೆ ಫಲ ಪರಮಾತ್ಮಪ್ರಾಪ್ತಿ. ಕೊನೆಯ ಕಾಲದಲ್ಲಿ ಮನುಷ್ಯನು ಏನನ್ನು ಸ್ಮರಿಸುತ್ತಾನೋ ಆ ಪದಾರ್ಥವನ್ನು ಹೊಂದುತ್ತಾನೆ. ಆದಕಾರಣ ಪರಮಾತ್ಮನ ಪ್ರಾಪ್ತಿಯಾಗಬೇಕಾದರೆ ಸಾಯುವ ಕಾಲದಲ್ಲಿ ಆತನನ್ನೇ ಸ್ಮರಿಸಬೇಕು. ನಿತ್ಯದಲ್ಲಿ ಆತನನ್ನು ಸ್ಮರಿಸುತ್ತಿದ್ದರೆ ಮಾತ್ರ, ಸಾಯುವ ಕಾಲದಲ್ಲಿ ಆತನ ನೆನಪು ಆಗುತ್ತದೆ. ಇಲ್ಲದಿದ್ದರೆ ಇಲ್ಲ. ಸಾಯುವ ಕಾಲಕ್ಕೆ ಆತನನ್ನು ಏನೆಂದು ಸ್ಮರಿಸಬೇಕೆಂದರೆ ಪರಮಾತ್ಮನು ಸರ್ವಜ್ಞನು ಶಾಸನಕರ್ತನು, ಅಣುವಿಗಿಂತ ಅಣುಸ್ವರೂಪನು, ಚರಾಚರ ಪ್ರಪಂಚವನ್ನು ಧಾರಣಮಾಡುವವನು, ಅಚಿಂತ್ಯರೂಪನು, ಆದಿತ್ಯವರ್ಣವುಳ್ಳವನು, ಪ್ರಕೃತಿಯ ಆಚೆಗೆ ಇರುವವನು ಎಂಬುದಾಗಿ ಸ್ಮರಿಸಬೇಕು. ಪ್ರಯಾಣಕಾಲದಲ್ಲಿ ಭೂಮಧ್ಯದಲ್ಲಿ ಪ್ರಾಣವನ್ನಿಟ್ಟು ಅಚಲವಾದ ಮನಸ್ಸಿನಿಂದ ಆತನನ್ನು ಹೀಗೆ ಸ್ಮರಿಸುತ್ತ ಸತ್ತರೆ ಆತನ ಪ್ರಾಪ್ತಿಯಾಗುತ್ತದೆ. ಸರ್ವವಾಯುದ್ವಾರಗಳನ್ನು ಸಂಯಮನಮಾಡಿಕೊಂಡು ಮನಸ್ಸನ್ನು ಪರಮಾತ್ಮನಲ್ಲಿ ಇಟ್ಟು, ಪ್ರಾಣವಾಯುವನ್ನು ಸುಷುಮ್ನಾನಾಡಿಯ ದ್ವಾರದಿಂದ ಬ್ರಹ್ಮರಂಧ್ರಕ್ಕೆ ಒಯ್ದು ಅಖಂಡವಾದ ಸ್ಮೃತಿಯಲ್ಲಿ ಇದ್ದುಕೊಂಡು ಓಂಕಾರವನ್ನು ಉಚ್ಚಾರಮಾಡುತ್ತ ದೇಹ ಬಿಡುವವನಿಗೆ ಆತನ ಪ್ರಾಪ್ತಿಯಾಗುತ್ತದೆ. ಅಲ್ಲಿಂದ ಪುನರ್ಜನ್ಮವಿಲ್ಲ.

**ಅಣುವಿನೊಳಗಣುವಹನು ಘನಕ್ಕೆ ಘನತರನಹನು**

**ಆಣುಮಹದ್ವಿಲಕ್ಷಣ ಕಲ್ಯಾಣಗುಣಜ್ಞಾನ**

-ಜಗನ್ನಾಥದಾಸರು

ಮೇರುಸ್ಥ ಬ್ರಹ್ಮಸದನದ ಮೇಲಿನ ಲೋಕಗಳೆಂದರೆ ಬನ, ತಪ, ಸತ್ಯಲೋಕಗಳು. ಈ ಮೂರು ಲೋಕಗಳಲ್ಲಿರುವ ಜನರಿಗೆ ಪುನರ್ಜನ್ಮವಿಲ್ಲ. ಅದಕ್ಕಿಂತ ಕೆಳಗಿನ ಲೋಕಗಳಲ್ಲಿರುವ ಭುವರ್, ಸ್ವರ್‌ಮಹ ಲೋಕಗಳಲ್ಲಿರುವವರಿಗೆ ಪುನರ್ಜನ್ಮವಿದೆ. ಆ ಮೇಲಿನ ಮೂರು ಲೋಕಗಳಲ್ಲಿ ಇದ್ದ ಮಾತ್ರಕ್ಕೆ ಪುನರ್ಜನ್ಮವಿಲ್ಲ ಎಂದು ಅರ್ಥವಲ್ಲ. ಆ ಲೋಕದಲ್ಲಿ ಶ್ರೀಕೃಷ್ಣನನ್ನು ಹೊಂದಿದವರಿಗೇನೇ

ಪುನರ್ಜನ್ಮವಿಲ್ಲ. ಇದು ಒಂದು ಅರ್ಥ. ಇದಕ್ಕೆ ಮತ್ತೂ ಒಂದು ಅರ್ಥವಿದೆ. ಅದೇನೆಂದರೆ ಬ್ರಹ್ಮ ಭವನವೆಂದರೆ ಸತ್ಯಲೋಕವೆಂದು ಅರ್ಥಮಾಡಿದರೂ ಅದರ ಕೆಳಗಿನವರಿಗೆ ಅಂಶದಿಂದ ಜನ್ಮವಿದೆ.

## ಸೃಷ್ಟಿ ಪ್ರಳಯಾದಿ ಕರ್ತೃತ್ವ

ಪರಬ್ರಹ್ಮನ ಹಗಲು ರಾತ್ರಿಗಳು ಯಾವುವೆಂಬುದನ್ನು ನಾವು ಅರಿತುಕೊಳ್ಳಬೇಕು. ಪ್ರಳಯಕಾಲದಲ್ಲಿ ಯಾವತ್ತು ಜಗತ್ತು ಆತನಲ್ಲಿ ಪ್ರವೇಶಿಸುತ್ತದೆ. ಪುನಃ ಆತನಿಗೆ ಹಗಲುಂಟಾದಾಗ ಅದು ಹುಟ್ಟುತ್ತದೆ. ಈ ಸೃಷ್ಟಿ ಪ್ರಳಯಗಳು ಅನಂತವಾಗಿವೆ, ಅವಕ್ಕೆ ವಿಚ್ಛೇದವಿಲ್ಲ. ಆ ಪರಮಾತ್ಮನು ಈ ಸೃಷ್ಟಿ ಪ್ರಳಯಗಳ ಆಚೆಗೆ ಇರುತ್ತಾನೆ. ಎಲ್ಲ ಪ್ರಾಣಿಗಳು ನಾಶವಾದರೂ ಆತನಿಗೆ ನಾಶವಿಲ್ಲ. ಆದಕಾರಣ ಆತನಿಗೆ ಅಕ್ಷರವೆನ್ನುತ್ತಾರೆ. ಆತನೇ ನಮಗೆ ಪರಮಗತಿಯು, ಆತನು ಅನನ್ಯವಾದ ಭಕ್ತಿಯಿಂದ ಮಾತ್ರ ಲಭ್ಯನು.

## ಬ್ರಹ್ಮಪ್ರಾಪ್ತಿ ಮಾರ್ಗ

ಮನುಷ್ಯನು ಸತ್ತಕೂಡಲೆ ಆತನ ದೇಹ ಸರ್ವಸ್ವವೂ ನಷ್ಟವಾಯಿತೆಂದು ಜನರು ತಿಳಿಯುತ್ತಾರೆ. ಭೂಮಿಯಲ್ಲಿ ಸತ್ತಕೂಡಲೆ ಜೀವನು ದೇಹವನ್ನು ಬಿಟ್ಟು ಮೇಲಕ್ಕೆ ಹೋಗುವಾಗ ಮುಂದೆ ೧೫ನೆಯ ಅಧ್ಯಾಯದಲ್ಲಿ ಹೇಳಿದಂತೆ ಒಬ್ಬನೇ ಹೋಗುವುದಿಲ್ಲ. ತನ್ನ ಸಂಗಡ ಸೂಕ್ಷ್ಮವಾದ ಐದು ಜ್ಞಾನೇಂದ್ರಿಯಗಳನ್ನೂ ಮನಸ್ಸನ್ನೂ ತೆಗೆದುಕೊಂಡು ಹೋಗುತ್ತಾನೆ. ಹೀಗೆ ಹೋಗುವಾಗ ಆತನು ಒಂದು ವಿಶಿಷ್ಟ ಮಾರ್ಗವನ್ನು ಅವಲಂಬಿಸುತ್ತಾನೆ. ಜೀವನು ಕಾಲಾಭಿಮಾನಿ ದೇವತೆ ಮುಂತಾದ ಅನೇಕ ದೇವತೆಗಳಿಗೆ ಭೆಟ್ಟಿಯಾಗಿ ಆ ದೇವತೆಗಳೊಡನೆ ಮುಂದಕ್ಕೆ ಸಾಗುತ್ತಾನೆ. ಆ ಜೀವವು, ಅಗ್ನಿ, ಜ್ಯೋತಿ, ಹಗಲು, ಶುಕ್ಲಪಕ್ಷ, ಉತ್ತರಾಯಣ ಇವೇ ಮುಂತಾದವುಗಳ ಅಭಿಮಾನಿದೇವತೆಗಳ ಮಾರ್ಗದಲ್ಲಿ ಹೋದರೆ ಆ ಜೀವನಿಗೆ ಪುನರ್ಜನ್ಮವಿಲ್ಲವೆಂದೂ ಧೂಮ, ರಾತ್ರಿ, ಕೃಷ್ಣಪಕ್ಷ, ಷಣ್ಮಾಸಗಳು, ದಕ್ಷಿಣಾಯನ ಇವುಗಳ ಅಭಿಮಾನಿದೇವತೆಗಳಿಂದ ಅಧಿಷ್ಠಿತವಾದ ದೇವತೆಗಳೊಡನೆ ಚಂದ್ರಲೋಕಕ್ಕೆ ಹೋದರೆ ಪುನರ್ಜನ್ಮವಿದೆಯೆಂದೂ ನಮ್ಮ ಜನರಲ್ಲಿ ನಂಬಿಗೆಯುಂಟು.

**ಸತ್ತು ಹುಟ್ಟುವ ಸುಳಿಯಲ್ಲದೆ ಮತ್ತೊಂದು |**
**ಗೊತ್ತು ಇಲ್ಲದೆ ಹೋಯಿತೋ, ಹೇ ದೇವ**

-ಪುರಂದರದಾಸರು

೧೩ನೆಯ ಪ್ರಕರಣ

(೯ನೆಯ ಅಧ್ಯಾಯದ ತಾತ್ಪರ್ಯ)

# ರಾಜವಿದ್ಯೆ ರಾಜಗುಹ್ಯಗಳು

ಏಳನೆಯ ಅಧ್ಯಾಯದಲ್ಲಿ ಹೇಳಿದ ಪದಾರ್ಥಗಳ ವ್ಯಾಖ್ಯೆಗಳು ಎಂಟನೆಯ ಅಧ್ಯಾದಲ್ಲಿ ಕೊಡಲ್ಪಟ್ಟವು. ಇನ್ನು ಈ ಅಧ್ಯಾಯದಲ್ಲಿ ಆ ಪದಾರ್ಥಗಳ ಸಂಬಂಧವಾಗಿ ತಿಳಿದುಕೊಳ್ಳತಕ್ಕ ಮುಖ್ಯ ಸಿದ್ಧಾಂತಗಳು ಯಾವುವೆಂಬುದು ಹೇಳಲ್ಪಡುತ್ತದೆ. ಏಕೆಂದರೆ ಪದಾರ್ಥಜ್ಞಾನ ಪೂರ್ವಕವಾದ ವಾಕ್ಯಾರ್ಥವೇ ಜ್ಞಾನವು.

ಈ ಒಂಭತ್ತನೆಯ ಅಧ್ಯಾಯದಲ್ಲಿ ಹೇಳಿದ ವಿದ್ಯೆಯು ರಾಜವಿದ್ಯೆಯು, ರಾಜಗುಹ್ಯೆಯು. ಇದು ಅತ್ಯಂತ ಪವಿತ್ರವಾದುದು. ಅಪರೋಕ್ಷಜ್ಞಾನಕ್ಕೆ ಸಾಧನವಾದುದು, ಪರಮಾತ್ಮನ ಪ್ರೀತಿಗೆ ಸಾಧನವಾದುದು, ಅವ್ಯಯವಾದ ಮೋಕ್ಷಫಲವನ್ನು ಕೊಡುವಂಥದು, ಮತ್ತು ಆಚರಿಸಲಿಕ್ಕೆ ಅತ್ಯಂತ ಸುಲಭವಾದುದು.

ಇಲ್ಲಿ ಹೇಳಿರುವ ಆ ಮುಖ್ಯ ಸಿದ್ಧಾಂತಗಳು ಯಾವುವೆಂದರೆ (೧) ಈ ಸರ್ವ ಚರಾಚರಾತ್ಮಕವಾದ ಪ್ರಪಂಚವು ಅವ್ಯಕ್ತಮೂರ್ತಿಯಾದ ಅಂದರೆ ಅತ್ಯಂತ ಸೂಕ್ಷ್ಮ ಮತ್ತು ಅಪ್ರಾಕೃತದೇಹವುಳ್ಳ ಪರಮಾತ್ಮನಿಂದ ವ್ಯಕ್ತವಾಗಿದೆಂಬುದು. ಅಂದರೆ, ಪರಮಾತ್ಮನು ಸರ್ವಾಧಾರನು ಎಂಬ ತತ್ತ್ವವನ್ನು ನಾವು ಮುಂಚೆ ನೆನಪಿನಲ್ಲಿಡಬೇಕು. (೨) ಹೀಗೆ ಆತನು ಜಗತ್ತಿಗೆ ಆಧಾರನಾಗಿದ್ದರೂ ಆತನಲ್ಲಿ ಸರ್ವಪದಾರ್ಥಗಳು ಇರುತ್ತವಲ್ಲದೆ ಅವುಗಳ ಆಧಾರದಿಂದ ಆತನು ಇರುವುದಿಲ್ಲ. (೩) ಮೂರನೆಯ ಸಿದ್ಧಾಂತವೆಂದರೆ ಆತನಲ್ಲಿ ಜಗತ್ತೆಲ್ಲವೂ ಇದ್ದರೂ ಆ ಜಗತ್ತಿನ ಗುಣಧರ್ಮಗಳ ಸಂಪರ್ಕವು ಆತನಿಗೆ ಇಲ್ಲ. ನಾವು ಭೂಮಿಯಲ್ಲಿ ಇದ್ದೇವೆ, ಅಂದರೆ ಭೂಮಿಯು ನಮಗೆ ಆಧಾರವಿದೆ. ಅದರ ಗುಣಧರ್ಮಗಳು ಅಂದರೆ ಶೈತ್ಯಾದಿಗಳು ನಮ್ಮ ಮೇಲೆ ಪರಿಣಾಮವನ್ನುಂಟುಮಾಡುತ್ತವೆ. ಆದರೆ ಪರಮಾತ್ಮನಲ್ಲಿ ಜಗತ್ತೆಲ್ಲವೂ ಇದ್ದರೂ ಜಗತ್ತಿನ ಗುಣಧರ್ಮಗಳ ಸಂಪರ್ಕವು ಆತನಿಗೆ ಇರುವುದಿಲ್ಲ. ಆತನು ಪ್ರಾಕೃತಸ್ಪರ್ಶರಹಿತನು. (೪) ಆದರೆ, ಮತ್ತೊಂದು ದೃಷ್ಟಿಯಿಂದ ಹೇಳುವುದಾದಲ್ಲಿ, ಅವು ಆತನಲ್ಲಿ ಇವೆಯೆಂದೂ ಹೇಳಬಹುದು. ಅಂದರೆ ಪರಮಾತ್ಮನು ಭೂತಾಧಾರನಾದರೂ ಅವು ಆತನಿಗೆ ಆಧಾರಗಳಲ್ಲ. ಪರಮಾತ್ಮನು ಭೂತಗಳನ್ನು ಧಾರಣಮಾಡಿದರೂ ಭೂತಸ್ಥನಾಗಿರುವುದಿಲ್ಲ. ಇದಕ್ಕೆ ದೃಷ್ಟಾಂತ. ಆಕಾಶ, ಗಾಳಿಯು ಆಕಾಶದಲ್ಲಿದ್ದಾಗೂ ಅದಕ್ಕೆ ಗಾಳಿಯ ಗುಣಧರ್ಮಗಳ ಲೇಪವಿಲ್ಲವಷ್ಟೇ. ಅದೇ

ಮೇರೆಗೆ ಪರಮಾತ್ಮನ ವಿಷಯದಲ್ಲಿಯೂ ತಿಳಿಯಬೇಕು. ಇದೇ ಆತನ ಅಲೌಕಿಕ ಮಹಿಮೆ. (೪) ಪರಮಾತ್ಮನು ತನ್ನ ಪ್ರಕೃತಿಯನ್ನು ಕಾರಣವನ್ನಾಗಿ ಇಟ್ಟುಕೊಂಡು ಈ ಚರಾಚರ ಜಗತ್ತನ್ನು ಹುಟ್ಟಿಸುತ್ತಾನೆ. (೫) ಹೀಗೆ ಆತನು ಸಕಲ ಸೃಷ್ಟಿವ್ಯಾಪಾರಗಳನ್ನು ಮಾಡಿದರೆ, ಅವು ಆತನನ್ನು ಬಂಧಿಸುವುದಿಲ್ಲ. ಆತನು ಉದಾಸೀನನಂತೆಯೇ ಇರುತ್ತಾನೆ. ಪ್ರಕೃತಿಯು ಸ್ವತಂತ್ರ ಕರ್ತೃವಲ್ಲ. ಆತನ ಅಧ್ಯಕ್ಷತೆಯಲ್ಲಿ ಅದು ಜಗತ್ತನ್ನು ಸೃಷ್ಟಿಸುತ್ತದೆ. ಇವು ಈ ಅಧ್ಯಾಯದಲ್ಲಿ ಹೇಳಿರುವ ಮುಖ್ಯ ಸಿದ್ಧಾಂತಗಳು.

ಈ ಸಿದ್ಧಾಂತಗಳನ್ನು ಮೂಢರು ಒಪ್ಪುವುದಿಲ್ಲ. ಆದಕಾರಣ, ಅವರ ಕರ್ಮಗಳೂ ವ್ಯರ್ಥವಾಗುತ್ತವೆ. ಆಕಾಂಕ್ಷೆಗಳೂ ವ್ಯರ್ಥವಾಗುತ್ತವೆ. ಮಹಾತ್ಮರಾದವರು ಹೀಗೆ ಮಾಡದೆ ದೈವೀಪ್ರಕೃತಿಯನ್ನು ಆಶ್ರಯಿಸಿ, ಪರಮಾತ್ಮನನ್ನು ಅನನ್ಯರೀತಿಯಿಂದ ಭಜಿಸುತ್ತಾರೆ.

**ಫಲವಿದು ಬಾಳ್ವುದಕೆ ಸಿರಿ**
**ನಿಲಯನ ಗುಣಗಳ ತಿಳಿದು ಭಜಿಸುವುದೆ |**
**ಬಿಗಿದ ಕಂಠದಿಂದ್ಯೃಗ್ಬಾಷ್ಪಗಳಿಂ**
**ನಗೆ ಮೊಗದಿಂ ರೋಮಗಳೊಗೆದು**
**ಮಿಗೆ ಸಂತೋಷದಿ ನೆಗೆದಾಡುತ ನಾ**
**ಲ್ಮೊಗನಯ್ಯನ ಪದ ಪೊಗಳಿ ಹಿಗ್ಗುವುದೆ |**

-ಜಗನ್ನಾಥ ದಾಸರು

ಎಂದು ಹಾಡುತ್ತಪಾಡುತ್ತ ಭಕ್ತಿಯಿಂದ ಪರಮಾತ್ಮನ ಆರಾಧನೆಯಲ್ಲಿ ಅವರು ಮಗ್ನರಾಗಿರುತ್ತಾರೆ. ಕೆಲವರು ಹೀಗೆ ಭಕ್ತಿಯೋಗವನ್ನು ಕೈಕೊಂಡರೆ, ಕೆಲವರು ಜ್ಞಾನಯಜ್ಞದಿಂದ ಆತನ ಉಪಾಸನೆಯನ್ನು ಮಾಡುತ್ತಾರೆ.

ಈ ಬಗೆಯಾಗಿ ಮುಖ್ಯವಾದ ಭಕ್ತಿಯೋಗವನ್ನು ಹೇಳಿದ ಬಳಿಕ, ಈ ಅಧ್ಯಾಯದಲ್ಲಿ ಹಿಂದೆ ಏಳನೆಯ ಅಧ್ಯಾಯದಲ್ಲಿ ವರ್ಣಿಸಲ್ಪಟ್ಟ ವಿಜ್ಞಾನವು ಹೆಚ್ಚಿಗೆ ವಿವರಿಸಲ್ಪಟ್ಟಿವೆ ಹೇಗೆಂದರೆ ಪರಮಾತ್ಮನು (೧) ಕ್ರತುವು (೨) ಯಜ್ಞನು (೩) ಸ್ವಧೆಯು (೪) ಔಷಧನು (೫) ಮಂತ್ರನು (೬) ಆಜ್ಯನು (೭) ಅಗ್ನಿಯು (೮) ಹುತನು (೯) ಜಗತ್ತಿನ ಪಿತನು, ಮಾತೃವು ಧಾತೃವು, ಪಿತಾಮಹನು (೧೦) ವೇದ್ಯನು (೧೧) ಪವಿತ್ರವಾದ ಓಂಕಾರನು (೧೨) ಋಕ್ ಯಜುಃ ಸಾಮವೇದನು (೧೩) ಆತನೇ ಗತಿಯು (೧೪) ಸಂರಕ್ಷಕನು (೧೫) ಸಾಕ್ಷಿಯು (೧೬) ಆಶ್ರಯನು (೧೭) ಶರಣನು (೧೮) ಮಿತ್ರನು (೧೯) ಪ್ರಭವನು (೨೦) ಪ್ರಳಯನು (೨೧) ಸ್ಥಾನನು (೨೨) ನಿಧಾನನು (೨೩) ಅವ್ಯಯವಾದ ಬೀಜನು (೨೪) ಸೂರ್ಯನಲ್ಲಿದ್ದು ಪ್ರಕಾಶಿಸುವವನೂ ಆತನೇ (೨೫)

ಮೇಘಗಗಳಲ್ಲಿದ್ದು ಮಳೆಗರೆಯುವಾತನೂ ಆತನೇ (೨೬) ಅಮೃತನು (೨೭) ಮೃತ್ಯುವು (೨೮) ಸತ್‌ಪದಾರ್ಥವೂ ಆತನು (೨೯) ಅಸತ್ ಪದಾರ್ಥವೂ ಆತನು.

ತ್ರೈವಿದ್ಯರು ಆತನನ್ನು ಅರಿಯರು. ಅವರು ಅನ್ಯದೇವತೆಗಳನ್ನು ಪೂಜಿಸುವುದರಿಂದ ಅವರಿಗೆ ಪುನರ್ಜನ್ಮವಿದೆ. ಸ್ವರ್ಗಲೋಕಗಳನ್ನು ಅನುಭವಿಸಿದ ಬಳಿಕ ಅವರು ಭೂಲೋಕಕ್ಕೆ ಬೀಳುತ್ತಾರೆ.

**ಮರನೇರಿ ನಕ್ಕಾಡಿ ಕೆಳಯಿಕೆ ಬೀಳ್ವಂತೆ |**
**ಸುರರು ಭೂತಳಕೆ ಬೀಳುವರು |**

-ಭರತೇಶವೈಭವ

ಆದರೆ, ಪರಮಾತ್ಮನನ್ನು ಅನನ್ಯಭಕ್ತಿಯಿಂದ ಭಜಿಸುವವರ ಯೋಗಕ್ಷೇಮವನ್ನು ಪರಮಾತ್ಮನೇ ನೋಡಿಕೊಳ್ಳುತ್ತಾನೆ.

**ಅರಿಯರೋ ನೀನಲ್ಲದೆ ಮತ್ತನ್ಯದೇವರ |**
**ಮರೆಯರೋ ನೀಮಾಡಿದ ನಿಮಿತ್ತೋಪಕಾರ |**
**ತೊರೆಯರೋ ನಿನ್ನಂಘ್ರಿಸೇವೆ ಪ್ರತಿವಾಸರ |**
**ಅರಿಯರೋ ಪರತತ್ವವಲ್ಲದೆ ಇತರ ವಿಚಾರ**

-ಜಗನ್ನಾಥ ದಾಸರು

ಅನ್ಯದೇವತೆಗಳನ್ನು ಪೂಜಿಸುವರೂ ಪರ್ಯಾಯದಿಂದ ಆತನನ್ನೇ ಪೂಜಿಸುವರೇನೋ ಅಹುದು. ಏಕೆಂದರೆ, ಸರ್ವಯಜ್ಞಗಳ ಭೋಕ್ತೃವು ಪ್ರಭುವು ಪರಮಾತ್ಮನೇ. ಆದರೆ ಅವರಿಗೆ ಈ ತತ್ವವು ತಿಳಿಯದಿರುವ ಮೂಲಕ ಅವರು ಅಡ್ಡದಾರಿ ಹಿಡಿಯುತ್ತಾರೆ. ದೇವತೆಗಳನ್ನು ಭಜಿಸುವವರು ಆ ದೇವತೆಗಳನ್ನು ಹೊಂದುತ್ತಾರೆ. ಪಿತೃಗಳನ್ನು ಭಜಿಸುವವರು ಪಿತೃಗಳನ್ನು ಹೊಂದುತ್ತಾರೆ, ಭೂತಗಳನ್ನು ಭಜಿಸುವವರು ಭೂತಗಳನ್ನು ಹೊಂದುತ್ತಾರೆ. ಪರಮಾತ್ಮನನ್ನು ಪೂಜಿಸುವವರಿಗೆ ಮಾತ್ರವೇ ಪರಮಾತ್ಮನ ಪ್ರಾಪ್ತಿಯಾಗುತ್ತದೆ. ಅಂಥವರಿಗೆ ಯಾವ ಚಿಂತೆಯೂ ಇರುವುದಿಲ್ಲ. ಅವರು ಸಂಸಾರದಲ್ಲಿ ಮದ್ದಾನೆಯಂತೆ ಸಂಚರಿಸುತ್ತಾರೆ.

**ಇಂದಿಗೆಂದು ನಾಳಿಗೆಂದು ಚಿಂತಿಸಲೇಕೆ?**
**ತಂದಿಕ್ಕುವ ಶಿವಂಗೆ ಬಡತನವೇ |**

-ವಚನಶಾಸ್ತ್ರ

**ಕೊಡುವ ಕರ್ತ ಬೇರೆ, ಇರುತಿರೆ**
**ಬಿಡುಬಿಡು ಚಿಂತೆಯನು**

-ಪುರಂದರದಾಸರು

ಪರಮಾತ್ಮನನ್ನು ಪೂಜಿಸುವುದು ಸುಲಭ. ಪತ್ರಪುಷ್ಪಫಲಗಳಿಂದ ಆತನು ತೃಪ್ತಿಹೊಂದುತ್ತಾನೆ. ಆತನಿಗೆ ಮುಖ್ಯವಾಗಿ ಬೇಕಾದುದು ಭಕ್ತಿ. ಆದಕಾರಣ-

**ನೋಡುವುದೆ ಹರಿಮೂರ್ತಿ ಕೇಳುವುದೆ ಹರಿಕೀರ್ತಿ**
**ಆಡುವುದೆ ಹರಿವಾರ್ತೆ ಮಾಡುವುದೆ ಹರಿಪೂಜೆ**
**ನೀಡುವುದೆ ಅವಧಾನ ಬೇಡುವುದೆ ಪುರುಷಾರ್ಥ**
**ಕೂಡುವುದೆ ಸಾಯುಜ್ಯವು**

-ಜಗನ್ನಾಥದಾಸರು

ಎಂದು ತಿಳಿಯಬೇಕು. ಹೀಗೆ ಮಾಡಿದರೆ ಶುಭಾಶುಭ ಬಂಧನವಿಲ್ಲ. ಪರಮಾತ್ಮನು ಎಲ್ಲರಿಗೂ ಸಮನು. ಆತನಿಗೆ ದ್ವೇಷಿಯೂ ಇಲ್ಲ ಪ್ರಿಯನೂ ಇಲ್ಲ. ಭಕ್ತಿಯಿಂದ ಆತನನ್ನು ಆರಾಧಿಸುವವರೇ ಆತನಿಗೆ ಪ್ರಿಯರು. ಅಂಥವರು ದುರಾಚಾರಿಗಳಾಗಿದ್ದರೂ ಕೂಡ, ಅವರು ಮುಂದೆ ಚಲೋ ದಾರಿಯನ್ನು ಹಿಡಿಯುತ್ತಾರೆ. ಮತ್ತು ಸಾಧುಗಳಾಗುತ್ತಾರೆ. ಒಟ್ಟಿಗೆ ಪರಮಾತ್ಮನನ್ನು ಆಶ್ರಯಿಸಿದರೂ ಸ್ತ್ರೀಯರೇ ಇರಲಿ, ವೈಶ್ಯರೇ ಇರಲಿ, ಶೂದ್ರರೇ ಇರಲಿ ಅವರಿಗೆ ಪರಮಗತಿಯಾಗುತ್ತದೆ. ಅಂದಬಳಿಕ ಪುಣ್ಯವಂತರಾದ ಬ್ರಾಹ್ಮಣರಿಗೆ ಕ್ಷತ್ರಿಯರಿಗೆ ಪರಮಗತಿಯಾಗುತ್ತದೆಂಬುದನ್ನು ಬೇರೆ ಹೇಳಬೇಕೆ? ಆದಕಾರಣ, ಮನುಷ್ಯನು ಯಾವಾಗಲೂ ಪರಮಾತ್ಮನಲ್ಲಿ ಮನಸ್ಸಿಡಬೇಕು, ಆತನ ಭಕ್ತನಾಗಬೇಕು. ಆತನಿಗೆ ನಮಸ್ಕಾರಮಾಡಬೇಕು. ಅಂದರೆ ಆತನ ಪ್ರಾಪ್ತಿಯಾಗುತ್ತದೆ.

೧೪ನೆಯ ಪ್ರಕರಣ

( ೧೦ನೆಯ ಅಧ್ಯಾಯದ ತಾತ್ಪರ್ಯ)

# ಪರಮಾತ್ಮನ ವಿಭೂತಿಗಳು

**ಶ್ರೀ ತರುಣಿವಲ್ಲಭನ ಪರಮ | ವಿಭೂತಿ ರೂಪವ ಕಂಡ ಕಂಡ |**
**ಲ್ಲೀ ತೆರದಿ ಚಿಂತಿಸುತ ಮನದಲಿ ನೋಡು ಸಂಭ್ರಮದಿ |**
**ನೀತ ಸಾಧಾರಣ ವಿಶೇಷಸಂ | ಜಾತಿ ನೈಜಾಹಿತವು ಸಹಜವಿ |**
**ಜಾತಿ ಖಡಾಖಂಡ ಬಗೆಗಳನರಿತು ಬುಧರಿಂದ**

--ಹರಿಕಥಾಮೃತಸಾರ ೫-೧

ಹಿಂದಿನ ಅಧ್ಯಾಯಗಳಲ್ಲಿ ಹೇಳಿದ ಭಗವನ್ಮಾಹಾತ್ಮ್ಯದಿಂದ ಅರ್ಜುನನ ಮನದಲ್ಲಿ ಭಕ್ತಿವಿಶ್ವಾಸಗಳು ಹುಟ್ಟಿದವು, ಆತನ ಸಂದೇಹಗಳು ಬಯಲಾದವು, ಆಗ ಆತನ ಮುಖದಲ್ಲಿ ಸಂತೋಷವು ಮಿಂಚಿತು. ಆದರೆ, ಇಲ್ಲಿಯವರೆಗೆ ಅರ್ಜುನನು ಕೇಳಿದ್ದು ಬೌದ್ಧಿಕ ಜ್ಞಾನವು, ಕೇವಲ ಬೌದ್ಧಿಕ ಜ್ಞಾನಕ್ಕೆ ಗೀತೆಯು ವಿಶೇಷ ಬೆಲೆಕೊಡುವುದಿಲ್ಲ. ಅದು ತನ್ನ ಜೀವನದಲ್ಲಿ ಇಳಿಯಬೇಕು. ಅದಕ್ಕೇನೇ ಅಪರೋಕ್ಷ ಅಥವಾ ಪ್ರತ್ಯಕ್ಷಜ್ಞಾನವೆನ್ನುತ್ತಾರೆ. ಧ್ಯಾನವು ಅದಕ್ಕೋಸ್ಕರ ಅವಶ್ಯ. ಪರಮಾತ್ಮನ ಧ್ಯಾನಮಾಡಬೇಕೆಂದು ಹೇಳುವುದು ಸುಲಭ. ಆದರೆ, ಆ ಪರಮಾತ್ಮನು ವಿಶ್ವವ್ಯಾಪಿಯು. ಆತನ ಸ್ವರೂಪವು ಮನಸ್ಸಿನಲ್ಲಿ ಬರುವುದು ಕಠಿನ. ಆದಕಾರಣ, ಮುಂಚೆ ಪ್ರತೀಕಗಳ ದ್ವಾರದಿಂದಲೇ ಧ್ಯಾನವನ್ನು ಮಾಡಬೇಕು. ಅಂಥ ಪ್ರತೀಕಗಳಲ್ಲಿಯೂ ತಾರತಮ್ಯವುಂಟು. ಪ್ರತಿಮೆ, ಮುಂತಾದ ಸ್ಥೂಲ ಪ್ರತೀಕಗಳನ್ನು ಧ್ಯಾನಮಾಡುವುದಕ್ಕಿಂತ, ರಸ, ಪ್ರಭೆ ಮುಂತಾದ ಹಿಂದೆ ಹೇಳಿದ ಸೂಕ್ಷ್ಮಪ್ರತೀಕಗಳಿಂದ ಧ್ಯಾನ ಮಾಡುವುದಕ್ಕೆ ಹೆಚ್ಚಿನ ಯೋಗ್ಯತೆ ಬೇಕಾಗುತ್ತದೆ. ಅಂಥ ಯೋಗ್ಯತೆಯುಳ್ಳವರಿಗೋಸ್ಕರ ಪರಮಾತ್ಮನ ವಿಭೂತಿರೂಪಗಳನ್ನು ಈ ಅಧ್ಯಾಯದಲ್ಲಿ ಹೇಳಿರುತ್ತದೆ. ಹಿಂದೆಯೂ ಈ ವಿಭೂತಿಗಳು ನಾನು ರಸನು, ನಾನು ಪ್ರಭೆಯು ಮುಂತಾಗಿ ಹೇಳಿದ್ದರೂ ಅಲ್ಲಿ ಅವನ್ನು ಹೇಳುವುದರ ಉದ್ದೇಶವು ಪರಮಾತ್ಮನ ಮಾಹಾತ್ಮವನ್ನು ತೋರಿಸುವುದಾಗಿತ್ತು, ಇಲ್ಲಿ ಉಪಾಸನೆಯು ಅವುಗಳ ಉದ್ದೇಶ.

ಆ ವಿಭೂತಿಗಳನ್ನು ಹೇಳುವುದಕ್ಕಿಂತ ಮುಂಚೆ ಮತ್ತೆ ಕೆಲವು ವಿಷಯಗಳು ಹೇಳಲ್ಪಟ್ಟಿವೆ. ಅವು ಯಾವುವೆಂದರೆ (೧) ಪರಮಾತ್ಮನ ಅಜ್ಞೇಯತ್ವ (೨) ಮುಕ್ತಿಪ್ರದತ್ವ (೩)

ಬುದ್ಧ್ಯಾದಿದಾತೃತ್ವ (೪) ಸರ್ವಕರ್ತೃತ್ವ ಇವು ಬಂದಿವೆ. ಇವಕ್ಕೆ ಫಲವನ್ನು ಹೇಳಿದ ಬಳಿಕ ವಿಭೂತಿಗಳು ಕೊಡಲ್ಪಟ್ಟಿವೆ.

ಪರಮಾತ್ಮನು ಅಜ್ಞೇಯನು ಎಂಬುದೇ ಮೊದಲಿನ ವಿಷಯ. ಆತನು ಅಜನು ಅಂದರೆ ಉತ್ಪತ್ತಿ ಶೂನ್ಯನು, ಜಗತ್ತಿನ ಸರ್ವ ವ್ಯಾಪಾರಗಳನ್ನು ನಡಿಸುವವನು. ಲೋಕ ಮಹೇಶ್ವರನು ಎಂಬುದಾಗಿ ಮಾತ್ರ ತಿಳಿದುಕೊಂಡರೆ ಸಾಕು. ಮನುಷ್ಯನಿಗೆ ಪಾಪಮೋಚನವಾಗುತ್ತದೆ. ಹೀಗೆ ತಿಳಿಯುವುದೆಂದರೆ ಸಾಮಾನ್ಯವಲ್ಲ. ಇದನ್ನು ತಿಳಿಯುವುದೆಂದರೆ ಮನುಷ್ಯನು ತನ್ನ ಇಡೀ ಜೀವಿತ ಕ್ರಮವನ್ನೇ ಬದಲುಮಾಡುವುದು. ಇದು ಗಾಡಿಯು ಹಿಂತಿರುಗುವ ನಿಲ್ಮನೆ (Reversing Station) ಇದ್ದಂತೆ ಇರುತ್ತದೆ. ಎಲ್ಲಿಯವರೆಗೆ ಮನುಷ್ಯನು ದೇವರಲ್ಲಿ ವಿಶ್ವಾಸವನ್ನಿಟ್ಟಿಲ್ಲವೋ ಅಲ್ಲಿಯವರೆಗೆ ಆತನು ನಡೆಯುವ ದಾರಿ ಬೇರೆ, ಒಮ್ಮೆ ಪರಮಾತ್ಮನಲ್ಲಿ ದೃಢವಾದ ವಿಶ್ವಾಸವು ನೆಲಿಸಿತೆಂದರೆ ಆತನು ನಡೆಯುವ ದಾರಿ ಬೇರೆ. ಈ ವಿಶ್ವಾಸವು ಆತನ ಜೀವಿತಕ್ರಮದಲ್ಲಿ ದೊಡ್ಡ ಕ್ರಾಂತಿಯನ್ನು ಮಾಡಿಬಿಡುತ್ತದೆ. ಪರಮಾತ್ಮನನ್ನು ತಿಳಿದುಕೊಂಡವನು- ಅಲ್ಲ ಆತನನ್ನು ಮನದಲ್ಲಿ ಹೊಳೆದುಕೊಂಡವನು ಹೊಸ ಮನುಷ್ಯನಾಗಿಯೇ ಹುಟ್ಟುತ್ತಾನೆ. ಜಗತ್ತಿನ ಕಡೆಗೆ ತಿರುಗಿದ್ದ ಆತನ ಮುಖವು ಆ ಮೇಲೆ ಪರಮಾತ್ಮನ ಕಡೆಗೆ ತಿರುಗುತ್ತದೆ. ಇದು ಸಾಮಾನ್ಯ ಕೆಲಸವಲ್ಲ. ಆದರೆ ಹೀಗೆ ಮಾಡುವವರೆಗೆ ಅಧ್ಯಾತ್ಮ ಜೀವನಕ್ಕೆ ಪ್ರಾರಂಭವೇ ಆಗುವುದಿಲ್ಲ, ಇರಲಿ.

ಪರಮಾತ್ಮನ ಮಹಿಮಾವಿಶೇಷವನ್ನು ಎಷ್ಟೊಂದು ವರ್ಣಿಸಬೇಕು? ಮನುಷ್ಯನಿಗೆ ಬುದ್ಧಿ ಮುಂತಾದವುಗಳೆಲ್ಲವನ್ನೂ ದಯಪಾಲಿಸಿರುವವನು ಅವನೇ (೧) ಬುದ್ಧಿ (೨) ಜ್ಞಾನ (೩) ಮೋಹವಿಲ್ಲದಿರುವುದು (೪) ಕ್ಷಮೆ (೫) ಸತ್ಯ (೬) ದಮ ಅಂದರೆ ಇಂದ್ರಿಯನಿಗ್ರಹ (೭) ಶಮ ಎಂದರೆ ಭಗವನ್ನಿಷ್ಠ ಬುದ್ಧಿ (೮) ಸುಖ (೯) ದುಃಖ (೧೦) ಹುಟ್ಟುವಿಕೆ (೧೧) ಇರುವಿಕೆ (೧೨) ಭಯ (೧೩) ಅಭಯ (೧೪) ಅಹಿಂಸೆ (೧೫) ಸಮತೆ (೧೬) ತುಷ್ಟಿ (೧೭) ತಪ (೧೮) ದಾನ (೧೯) ಯಶ (೨೦) ಅಯಶ ಇವೇ ಮುಂತಾದ ವಿವಿಧಧರ್ಮಗಳೆಲ್ಲವೂ ಆತನಿಂದಲೇ ಪ್ರಾಪ್ತವಾಗುತ್ತವೆ. ಅಂದರೆ ಚಲೋದಕ್ಕಷ್ಟೇ ಆತನು ಹೊಣೆಗಾರನೆಂತಲ್ಲ, ಕೆಟ್ಟದ್ದಕ್ಕೂ ಆತನೇ ಹೊಣೆಗಾರನು. ಈ ವಿವಿಧ ಧರ್ಮಗಳನ್ನು ಹುಟ್ಟಿಸಿದಂತೆಯೇ ಪ್ರಾಣಿಗಳ ಉತ್ಪತ್ತಿಗೂ ಆತನೇ ಕಾರಣನು, ಪೂರ್ವ ಮನ್ವಂತರದ ಸಪ್ತರ್ಷಿಗಳಾದ ಮರೀಚಿ, ಅತ್ರಿ, ಆಂಗಿರಸ, ಪುಲಸ್ತ್ಯ, ಪುಲಹ, ಕ್ರತು ಮತ್ತು ವಸಿಷ್ಠ ಮುಂತಾದ ಸಪ್ತ ಋಷಿಗಳಿಗೂ, ಯಾರಿಂದ ಈ ಲೋಕದೊಳಗಿನ ಪ್ರಜೆಗಳೆಲ್ಲರೂ ಹುಟ್ಟಿರುವರೋ ಆ ನಾಲ್ಕು ಮನುಗಳು ಎಂದರೆ (೧) ಸ್ವಾಯಂಭುವ (೨) ಸ್ವಾರೋಚಿಷ (೩) ರೈವತ

ಮತ್ತು (೪) ಉತ್ತಮ ಇವರ ಹುಟ್ಟಿಗೂ ಪರಮಾತ್ಮನೇ ಕಾರಣನು. ಇದನ್ನೆಲ್ಲ ತಿಳಿದವರಿಗೆ ಸಾಯಜ್ಯವೇ ಫಲವು.

ಹೀಗೆ ತಿಳಿಯುವವರ ಆಯುಷ್ಕ್ರಮಣವೇ ಬದಲಾಗುತ್ತದೆಯೆಂದು ಹೇಳಿದೆವಷ್ಟೆ, ಅಂಥವರು ಭಕ್ತಿಯುಕ್ತರಾಗಿ ಸದಾ ಆತನ ಪೂಜೆ ಅರ್ಚನಾದಿಗಳಲ್ಲಿ ತೊಡಗಿರುತ್ತಾರೆ, ಆತನ ಗುಣಗಾನವನ್ನು ಮಾಡುತ್ತಾರೆ. ಆತನ ಮಹಿಮೆಯನ್ನು ಶಿಷ್ಯರಿಗೆ ಬೋಧಿಸುತ್ತಾರೆ.

**ನಿನ್ನ ಸೂತ್ರದೊಳಾಡುವುವುಲೆ**
**ತನ್ನ ಸಚರಾಚರಗಳೆಲ್ಲವು |**
**ನಿನ್ನ ಸೂತ್ರವು ತಪ್ಪಿದರೆ ಮೊಗ್ಗುವುವು ಊಹೆಗಳು**

-ಕನಕದಾಸರು

ಎಂದು ತಿಳಿದು

**ಅಳುವರೊಮ್ಮೆ ಪರವಶರಾಗಿ ಮೈಮರೆದು |**
**ನಲುವರೊಮ್ಮೊಮ್ಮೆ ನಗುತ್ತ**
**ಜಲಜಾಕ್ಷನಮಲ ಮಂಗಳ ಗುಣವ ಕೇಳಿ ಗಂ |**
**ಟಲಶಲೆಗಳುಬ್ಬಿ ಚಪ್ಪಳೆಗಳಂ ಬಾರಿಸುತ್ತ**
**ಮುಳುಗಿ ಸುಖಜಲಧಿಯೊಳು ತನುವು ಪುಳಕೋತ್ಸವದಿ**
**ಇಳೆಯೊಳಗೆ ಸಂಚರಿಪ ಕಲುಷವರ್ಜಿತರು**

-ಜಗನ್ನಾಥದಾಸರು

ಇಂಥವರ ಅನಾದಿಯಾದ ಅಜ್ಞಾನಕೃತ ಬಂಧವನ್ನು ಪರಮಾತ್ಮನು ದೂರಮಾಡುವನು.

ಇದನ್ನೆಲ್ಲ ಕೇಳಿದ ಕೂಡಲೆ, ಅರ್ಜುನನಿಗೂ ಮೈಯುಬ್ಬಿತು ಮತ್ತು ಆತನು ಪರಮಾತ್ಮನ ಸ್ತೋತ್ರವನ್ನು ಮಾಡಲಿಕ್ಕೆ ಪ್ರಾರಂಭಮಾಡಿದನು. 'ಎಲೈ ಕೃಷ್ಣನೇ ನೀನೇ ಪರಬ್ರಹ್ಮನು, ಪರಂಧಾಮನು. ನಾರದ, ಅಸಿತ, ದೇವಲ, ವ್ಯಾಸ ಮುಂತಾದವರು ಕೂಡ ನಿನ್ನ ಮಹಿಮೆಯನ್ನು ಹೊಗಳಿರುವರು. ನೀನೂ ಅದನ್ನು ಈಗ ಹೇಳಿರುವೆ. ಅದರ ಆದ್ಯಂತವನ್ನು ನಿನ್ನ ಹೊರ್ತು ಬಲ್ಲವರಾರು ಎಂದು ಸ್ತುತಿಸಿದನು.

**ಸನಕಸನಂದ ಮುನಿಜನಾದಿಗಳು**
**ಅರಿಯರಯ್ಯ ನಿಮ್ಮ ಅಂತವ**

-ವಚನಶಾಸ್ತ್ರ ಪು. ೮

**ನಿಮ್ಮ ಆದ್ಯಂತವ ನೀವೇ ಅರಿವುತಿದ್ದಿರಲ್ಲಾ-ನಿಮ್ಮ**

ನಿಜಭಾವವ ನೀವೇ ಬಲ್ಲಿರಿ ಕೂಡಲಚೆನ್ನಸಂಗಮದೇವಾ

-ವಚನಶಾಸ್ತ್ರ ಪು. ೮

ಪರಮಾತ್ಮನನ್ನು ಸಂಪೂರ್ಣವಾಗಿ ಯಾರೂ ಅರಿಯರು. ಆದಕಾರಣ, ಆತನ ವಿಭೂತಿಗಳನ್ನು ಅರಿತು ಉಪಾಸನೆಮಾಡಬೇಕು. ಜಗತ್ತಿನ ಪ್ರತಿಯೊಂದು ಪದಾರ್ಥದಲ್ಲಿ ಆತನು ಅಂತರ್ಯಾಮಿಯಾಗಿದ್ದರೂ ಆತನು ಕೆಲವುಗಳಲ್ಲಿ ವಿಶೇಷವಾಗಿ ಇದ್ದಾನೆ. ಅಂಥ ವಿಭೂತಿಗಳು ನಾನಾವಿಧವಾಗಿವೆ. ಅವುಗಳಲ್ಲಿ ಕೆಲವುಗಳನ್ನು ಗೀತೆಯು ಕೊಟ್ಟಿರುತ್ತದೆ. ಅಂಥ ವಿಭೂತಿಗಳಲ್ಲಿ ಮುಖ್ಯವಾಗಿ ಎರಡು ವಿಧ (೧) ಪ್ರತ್ಯಕ್ಷ ವಿಭೂತಿರೂಪಗಳು. ಅಂದರೆ, ಸಾಕ್ಷಾತ್ ಅವತಾರಗಳು (೨) ತಿರೋಹಿತ ವಿಭೂತಿರೂಪಗಳು. ಅಂದರೆ ಅಡಗಿರುವ ವಿಭೂತಿರೂಪಗಳು. ಈ ತಿರೋಹಿತ ವಿಭೂತಿರೂಪಗಳಲ್ಲಿ ಪುನಃ (ಅ) ಸಮಾನ ಜಾತೀಯ ವಸ್ತುಗಳಲ್ಲಿ ಎಲ್ಲಕ್ಕೂ ಹೆಚ್ಚಿನ ಶ್ರೇಷ್ಠತೆಯನ್ನು ಕೊಡುವ ವಿಭೂತಿ ರೂಪಗಳು (ಬ) ಏಕದೇಶೀಯ ಶ್ರೇಷ್ಠತೆಯನ್ನು ಕೊಡುವ ರೂಪಗಳು ಕೆಲವು (ಕ) ಮತ್ತು ವಿಜಾತೀಯ ವಸ್ತುಗಳಲ್ಲಿ ಶ್ರೇಷ್ಠತೆಯನ್ನು ಕೊಡುವ ರೂಪಗಳು ಕೆಲವು.

ಇವುಗಳನ್ನು ನಾವು ಇಲ್ಲಿ ಕ್ರಮವಾಗಿ ಕೊಡುತ್ತೇವೆ.

೧. ಪ್ರತ್ಯಕ್ಷ ವಿಭೂತಿರೂಪಗಳು-ರಾಮ, ಕೃಷ್ಣ ವಿಷ್ಣು ಕಪಿಲ, ವ್ಯಾಸ.

೨. ತಿರೋಹಿತ ವಿಭೂತಿ ರೂಪಗಳಲ್ಲಿ

(ಅ) ಸಜಾತೀಯ ವಸ್ತುಗಳಲ್ಲಿ ಮಿಕ್ಕವುಗಳಿಗಿಂತ ಹೆಚ್ಚಿಗೆ ಶ್ರೇಷ್ಠವಾದ ವಸ್ತುಗಳು. ವೃಕ್ಷಗಳಲ್ಲಿ ಅಶ್ವತ್ಥ; ಜ್ಯೋತಿರ್ಮಯ ಪದಾರ್ಥಗಳಲ್ಲಿ ಸೂರ್ಯ; ಇಂದ್ರಿಯಗಳಲ್ಲಿ ಮನಸ್ಸು; ರುದ್ರರಲ್ಲಿ ಶಂಕರ; ಯಕ್ಷ ರಾಕ್ಷಸರಲ್ಲಿ ಕುಬೇರ; ಪರ್ವತಗಳಲ್ಲಿ ಮೇರು; ಪುರೋಹಿತರಲ್ಲಿ ಬೃಹಸ್ಪತಿ; ಸೇನಾನಿಗಳಲ್ಲಿ ಸ್ಕಂದ; ಜಲಸಂಚಯಗಳಲ್ಲಿ ಸಾಗರ; ಮಹರ್ಷಿಗಳಲ್ಲಿ ಭೃಗು; ಗಂಧರ್ವರಲ್ಲಿ ಚಿತ್ರರಥ; ಆಶ್ವಗಳಲ್ಲಿ ಉಚ್ಚೈಶ್ರವಸ್ಸು; ಗಜಗಳಲ್ಲಿ ಐರಾವತ; ನರರಲ್ಲಿ ನರಾಧಿಪ; ಆಕಳುಗಳಲ್ಲಿ ಕಾಮಧೇನು; ಪ್ರಜನರಲ್ಲಿ ಕಂದರ್ಪ; ಸರ್ಪಗಳಲ್ಲಿ ವಾಸುಕಿ; ನಾಗಗಳಲ್ಲಿ ಅನಂತ; ಸಂಯಮಿಗಳಲ್ಲಿ ಯಮ; ದೈತ್ಯರಲ್ಲಿ ಪ್ರಹ್ಲಾದ; ಬಂಧನ ಮಾಡುವವರಲ್ಲಿ ಕಾಲ; ಮೃಗಗಳಲ್ಲಿ ಸಿಂಹ ಇವೇ ಮುಂತಾದವುಗಳು.

(ಬ) ಸಜಾತೀಯ ವಸ್ತುಗಳಲ್ಲಿ ಏಕದೇಶಾಧಿಕ್ಯ ಎಂದರೆ ಅದೇ ಆ ವಸ್ತುಗಳಲ್ಲಿ ಶ್ರೇಷ್ಠವೆಂದು ಅರ್ಥವಲ್ಲ; ಆದರೂ ಇದೂ ವಿಭೂತಿ ರೂಪವೇ ಇರುತ್ತದೆ. ಉದಾ : ದೇವತೆಗಳಲ್ಲಿ ನಿಜವಾಗಿ ಬ್ರಹ್ಮನು ಎಲ್ಲಕ್ಕೂ, ಹೆಚ್ಚಿನವನು. ಆದರೂ ಗೀತೆಯಲ್ಲಿ ಇಂದ್ರನು ದೇವತೆಗಳಲ್ಲಿ ಹೆಚ್ಚಿನವನೆಂದು ಹೇಳಿದೆ. ಇದು ಏಕದೇಶಾಧಿಕ್ಯ. ಇದೇ ಮೇರೆಗೆ ಕವಿಗಳಲ್ಲಿ ಬ್ರಹ್ಮನು ಹೆಚ್ಚಿನ

ಕವಿಯು, ಬೃಹಸ್ಪತಿಯು ಏಕ ದೇಶ ಶ್ರೇಷ್ಠನು; ಪಾಂಡವರಲ್ಲಿ ಭೀಮನು ಹೆಚ್ಚಿನವನು; ಅರ್ಜುನನು ಏಕದೇಶ ಶ್ರೇಷ್ಠನು; ಯಜ್ಞಗಳಲ್ಲಿ ಜ್ಞಾನಯಜ್ಞವು ಹೆಚ್ಚಿನದು, ಜ್ಞಾನಯಜ್ಞವೊಂದು ಬಿಟ್ಟು ಮಿಕ್ಕ ಯಜ್ಞಗಳಲ್ಲಿ ಜಪಯಜ್ಞವು ಹೆಚ್ಚಿನದು; ಆಯುಧಗಳಲ್ಲಿ ಎಲ್ಲಕ್ಕೂ ಹೆಚ್ಚಿನದು ಸುದರ್ಶನವು, ಅದನ್ನು ಬಿಟ್ಟು ಮಿಕ್ಕ ಆಯುಧಗಳಿಗಿಂತ ವಜ್ರವು ಹೆಚ್ಚಿನದು; ವೇದಗಳಲ್ಲಿ ನಿಜವಾಗಿ ಋಗ್ವೇದವು ಹೆಚ್ಚಿನದು, ಅದನ್ನು ಬಿಟ್ಟರೆ, ಸಾಮವೇದವು ಹೆಚ್ಚಿನದು; ಹಾಗೆಯೇ ಮರುತ್ತರಲ್ಲಿ ಅಹಂಕಾರಿಕೆಯು ಹೆಚ್ಚಿನದು, ಅದಕ್ಕೆ ಕೆಳಗೆ ಮರೀಚಿಯು ಹೆಚ್ಚಿನದು.

(ಕ) ವಿಜಾತೀಯ ವಸ್ತುಗಳಲ್ಲಿ ಶ್ರೇಷ್ಠವಾದವುಗಳು. ಇವುಗಳಲ್ಲಿ ಎರಡು ವಿಧ. (೧) ವಿಜಾತೀಯ ವಸ್ತುಗಳಲ್ಲಿ ಸ್ವಾಮಿತ್ವವನ್ನು ಕೊಡುವ ವಸ್ತುಗಳು. ನಕ್ಷತ್ರಗಳಲ್ಲಿ ಚಂದ್ರ; ಜಲಚರ ಪ್ರಾಣಿಗಳಲ್ಲಿ ವರುಣ ಮುಂತಾದವುಗಳು. (೨) ವಿಜಾತೀಯ ವಸ್ತುಗಳಲ್ಲಿ ಸಾರದವಾದವು ಅಂದರೆ ಸಾರವನ್ನು ಕೊಡುವಂಥವು ಉದಾ :-ಸತ್ವವಂತರಲ್ಲಿಯ ಸತ್ವ, ನಾರಿಯರಲ್ಲಿ ಕೀರ್ತಿ, ಶ್ರೀ, ವಾಕ್ ಇವು. ಇವು ಸ್ತ್ರೀಲಿಂಗ ಶಬ್ದಗಳು. ಆದಕಾರಣ ನಾರಿಯರೆಂದೆನ್ನಿಸಿಕೊಳ್ಳುತ್ತವೆ. ನೀತಿ ಮತ್ತು ಮೌನ ಇವೂ ಇದೇ ಪ್ರಕಾರದ ವಿಜಾತೀಯ ವಸ್ತುಗಳಲ್ಲಿ ಸಾರಪದವಾದ ವಿಭೂತಿಗಳು.

ಹೀಗೆ ಶ್ರೀಕೃಷ್ಣನು ಸುಮಾರು ೭೫-೮೦ ವಿಭೂತಿರೂಪಗಳನ್ನು ಕೊಟ್ಟಿರುವನು. ಮತ್ತು ಕೊನೆಗೆ ಸಂಪೂರ್ಣವಾಗಿ ಹೇಳುವುದು ಅಸಾಧ್ಯ. ಮುಖ್ಯವಾಗಿ ಆತನು ತನ್ನ ಒಂದು ಅಂಶಮಾತ್ರದಿಂದ ಈ ಸರ್ವಜಗತ್ತನ್ನೂ ವ್ಯಾಪಿಸಿರುವನೆಂಬುದನ್ನು ತಿಳಿದಿರಬೇಕು.

ಈ ವಿಭೂತಿಗಳನ್ನು ಹೇಳುವುದರಲ್ಲಿ ಯಾವುದೊಂದು ಕ್ರಮವು ಇರುವುದಿಲ್ಲವೆಂಬುದು ನಿಜ. ಆದರೂ ಅವುಗಳಲ್ಲಿ ನಾವು ಕೆಲವು ವರ್ಗಗಳನ್ನು ಮಾಡಬಹುದು. ಆ ವಿಭೂತಿರೂಪಗಳಲ್ಲಿ ಕಪಿಲ, ವ್ಯಾಸ, ರಾಮ ಕೃಷ್ಣಾದಿ ಪ್ರತ್ಯಕ್ಷ ಅವತಾರಗಳು ಬಂದಿವೆ, ಬ್ರಹ್ಮ, ರುದ್ರ, ಇಂದ್ರ, ಕುಬೇರ, ಅಗ್ನಿ, ವರುಣ, ಸ್ಕಂದ, ಮರೀಚಿ, ಮಕಥ, ಯಮ, ಚಿತ್ರರಥ ಮುಂತಾದ ದೇವತೆಗಳು ಬಂದಿರುವರು. ನಾರದ, ಭೃಗು, ಬೃಹಸ್ಪತಿ ಶುಕ್ರ ಮುಂತಾದ ಋಷಿಗಳು ಇರುವರು, ಗಂಧರ್ವ, ಯಕ್ಷ, ರಾಕ್ಷಸರು ಬಂದಿರುವರು. ಪಿತೃದೇವತೆಗಳು ಬಂದಿರುವರು, ಅವುಗಳಲ್ಲಿ ಪ್ರಹ್ಲಾದ ಮುಂತಾದ ದೈತ್ಯರಿರುವರು. ಪರಾಧಿಪರರವರು. ರವಿ, ಚಂದ್ರ, ಸಾಗರ, ಮೇರು, ಹಿಮಾಲಯ, ಜಾಹ್ನವೀನದಿ, ವಜ್ರ, ಮುಂತಾದ ಭೌತಿಕಭವ್ಯ ವಸ್ತುಗಳಿರುವವು. ಆನೆ, ಕುದುರೆ, ಆಕಳು, ಹಾವು, ಗರುಡ, ಮತ್ಸ್ಯ, ಸಿಂಹ ಮುಂತಾದ ಪ್ರಾಣಿಶ್ರೇಷ್ಠಗಳಿರುವವು. ಬೀಜವೃಕ್ಷಗಳಿರುವವು. ವಸಂತ ಮುಂತಾದ ಋತುಗಳೂ ಮಾರ್ಗಶೀರ್ಷ ಮುಂತಾದ ಮಾಸಗಳೂ ಇರುವವು. ಅದೇ ಪ್ರಕಾರ ದ್ವಂದ್ವ ಸಮಾಸ, ಗಾಯತ್ರಿ, ಸಾಮವೇದ ಬೃಹತ್ಸಾಮ ಮುಂತಾದವುಗಳಿರುವವು. ದಿಕ್ಕಾಲಾದಿಗಳು ಇರುವವು. ಅಧ್ಯಾತ್ಮವಿದ್ಯೆ, ಶ್ರೀ, ವಾಕ್, ಧೈರ್ಯ, ಜಯ, ವ್ಯವಸಾಯ, ಸತ್ವ, ಬುದ್ಧಿ, ಮನಸ್ಸು,

ಸ್ಮೃತಿಗಳಿರುವವು. ಹೀಗೆ ಈ ವಿಭೂತಿಗಳಲ್ಲಿ ಯಾವತ್ತು ಬಗೆಯ ಸೃಷ್ಟವರ್ಗವು ಬಂದಿರುವುದು. ಎಲ್ಲೆಲ್ಲಿ ಹೆಚ್ಚಿನ ಸತ್ವವಿದೆಯೋ ಅಲ್ಲಲ್ಲಿ ಆತನ ವಿಭೂತಿರೂಪವು ಕಂಡು ಬರುವುದು.

ಪರಮಾತ್ಮನು ಪ್ರಜಾಸತ್ತಾಕ ರಾಜ್ಯದ ಅರಸನಲ್ಲ, ಆತನು ಸರ್ವತಂತ್ರ ಸ್ವತಂತ್ರನು, ಸರ್ವೋತ್ತಮನು, ಸರ್ವಾಧಾರನು, ಸರ್ವಾಂತರ್ಯಾಮಿಯು; ನಿರಂಕುಶಪ್ರಭುವು ಆತನು. ಆದರೆ ಆತನು ಕೈಲಾಸದಲ್ಲಿಯೋ ವೈಕುಂಠದಲ್ಲಿಯೋ ಎಲ್ಲಿಯೋ ಆಕಾಶದೊಳಗಿದ್ದು ಅಲ್ಲಿಂದ ಜಗತ್ತನ್ನಾಳುವ ದೊರೆಯಲ್ಲ. ಜಗತ್ತಿನ ಅಣುರೇಣು ತೃಣಕಾಷ್ಠದೊಳಗೆ ವ್ಯಾಪ್ತನಾಗಿದ್ದು ಆಳುವ ದೊರೆ. ಪೃಥ್ವಿಯಮೇಲೆ, ನಮ್ಮ ಕಣ್ಣಿಗೆ ಮೊದಲು ಪರ್ವತಗಳು ಹೇಗೆ ದೃಷ್ಟಿಗೆ ಎದ್ದು ಕಾಣುತ್ತವೆಯೋ ಹಾಗೆ ಈ ವಿಭೂತಿರೂಗಳು ನಮಗೆ ಎದ್ದು ಕಾಣುತ್ತವೆ. ಇಂಥ ವಿಭೂತಿರೂಪಗಳನ್ನು ನಾವು ನಮ್ಮ ಪ್ರತೀಕಗಳನ್ನಾಗಿ ಇಟ್ಟುಕೊಂಡು ಪೂಜಿಸಬೇಕು.

೧೫ನೆಯ ಪ್ರಕರಣ

( ೧೧ನೆಯ ಅಧ್ಯಾಯದ ತಾತ್ಪರ್ಯ )

# ವಿಶ್ವರೂಪದರ್ಶನ

**ಕಂಡ ಕಂಡಲ್ಲಿ ವಿಶ್ವರೂಪ ಕಾಂಬರು**

-ಜಗನ್ನಾಥದಾಸರು

**ಅನಂತ ಮುಕುಟ ಅನಂತ ಶಿರಸ್ಸು ಅನಂತ ನಯನ |**
**ಅನಂತನಾಸಿಕ ಅನಂತ ಕರ್ಣ ಅನಂತ ವದನ |**
**ಅನಂತ ಕಂಬು ಅನಂತ ಕಂಧರ ಅನಂತ ಶ್ರೀದೇವಿ |**
**ಶ್ರೀಗಂಧ ಶ್ರೀವತ್ಸ ಶ್ರೀ ತುಳಸಿ ವೈಜಯಂತಿ |**
**ಮಾಲೆಯಿಂದೊಪ್ಪಿಹನು ಅನಂತ |**
**ಅನಂತ ಬಾಹು ಅನಂತ ಭುಜವು ಅನಂತ ಹಸ್ತ |**
**ಅನಂತ ಮುದ್ರೆ ಅನಂತ ಶಂಖ ಅನಂತ ಚಕ್ರ |**
**ಅನಂತ ವಕ್ಷ ಅನಂತ ಕುಕ್ಷಿ ಅನಂತ ನಾಭಿ |**
**ಅನಂತ ಕಟಿ ಅನಂತ ಊರು ಅನಂತ ಭಾನು |**
**ಅನಂತ ಜಂಘೆ ಅನಂತ ಚರಣ ಆನಂತ ಪೆಂಡ್ಯದಿಂದೊ |**
**ಪ್ಪುತ ಹೊರ ಒಳಗಿಪ್ಪನೋ ಪುರಂ |**
**ದರ ವಿಠಲರಾಯನೊಬ್ಬ ಅನಂತ**

-ಪುರಂದರದಾಸರು

ಗೀತೆಯ ವಿಚಾರ ಪ್ರವಾಹವು ಎಲ್ಲಿಯವರೆಗೆ ಹರಿದುಬಂದಿದೆ, ನೋಡಿರಿ. ೭ನೆಯ ಅಧ್ಯಾಯದಿಂದ ಇಲ್ಲಿಯವರೆಗೆ ಹೇಳಿದ ಮುಖ್ಯ ವಿಷಯಗಳು ಯಾವುವೆಂಬುದನ್ನು ಸ್ವತಃ ಕೃಷ್ಣನೇ ಮೂರು ಶಬ್ದಗಳಲ್ಲಿ ಹೇಳಿರುವನು. ಅವು ಯಾವುವೆಂದರೇ (೧) ಪರಮಗುಹ್ಯವಾದ ಅಧ್ಯಾತ್ಮ ವಿದ್ಯೆ (೨) ಪ್ರಾಣಿಗಳ ಉತ್ಪತ್ತಿ ಲಯಗಳು (೩) ಅವ್ಯಯವಾದ ಮಾಹಾತ್ಮ್ಯ ಹೀಗೆ ಇಲ್ಲಿಯವರೆಗೆ ನಡೆದ ವಿವೇಚನೆಯಿಂದ ಅರ್ಜುನನ ಮನದಲ್ಲಿ ಪರಮಾತ್ಮನ ಮಾಹಾತ್ಮ್ಯವು ಪೂರ್ಣವಾಗಿ ಬಿಂಬಿಸಿತು. ಆತನ ಮುಖದಲ್ಲಿ ಹರ್ಷವು ಮೂಡಿತು. ಮತ್ತು ಆತನಿಗೆ ಪರಮಾತ್ಮನ

ವ್ಯಾಪ್ತರೂಪವನ್ನು ಪ್ರತ್ಯಕ್ಷವಾಗಿ ನೋಡಬೇಕೆಂಬ ಕುತೂಹಲವುಂಟಾಯಿತು. ಆಗ ಆತನು ಶ್ರೀ ಕೃಷ್ಣನನ್ನು ಆ ವಿಶ್ವರೂಪವನ್ನು ತೋರಿಸುವುದಕ್ಕೆ ಬೇಡಿಕೊಂಡನು. ಆದರೆ, ಆ ರೂಪವು ಲೋಕವಿಲಕ್ಷಣವಾದ ರೂಪವು. ಅದು ಮಾನವನ ಭೌತಿಕ ಕಣ್ಣುಗಳಿಗೆ ಕಾಣತಕ್ಕ ರೂಪವಲ್ಲ ಆದಕಾರಣ ಶ್ರೀಕೃಷ್ಣನು ಮುಂಚೆ ಅರ್ಜುನನಿಗೆ ದಿವ್ಯ ಚಕ್ಷಸ್ಸುಗಳನ್ನು ಕೊಟ್ಟು ಆ ವಿಶ್ವರೂಪವನ್ನು ತೋರಿಸಿದ್ದಾನೆ. ೧೧ನೆಯ ಅಧ್ಯಾಯದಲ್ಲೆಲ್ಲ ಆ ವಿಶ್ವರೂಪದ ವರ್ಣನೆಯೇ ಇದೆ, ನಮಗೆ ಆ ದಿವ್ಯ ಚಕ್ಷುಗಳಿಲ್ಲ, ವಾಚಕರಿಗೆ ದಿವ್ಯ ಚಕ್ಷುಗಳಿಲ್ಲ ಅಂದಬಳಿಕ, ಆ ವಿಶ್ವರೂಪವು ನಮ್ಮ ನಿಮಗೆ ಹೇಗೆ ಕಾಣಬೇಕು. ಆದಕಾರಣ, ಅದರ ವರ್ಣನೆಯಿಂದಲೇ ನಾವು ನಮ್ಮ ಸಮಾಧಾನವನ್ನು ಮಾಡಿಕೊಳ್ಳಬೇಕು. ಇದು ಕೇವಲ ಕವಿಕಲ್ಪನೆಯೆಂದು ಕೆಲವರ ಅಂಬೋಣ. ಮತ್ತು ಕಾಣಲಿಕ್ಕೆ ಅದು ಹಾಗೆ ಕಾಣುವುದೂ ನಿಜ. ಕವಿಕಲ್ಪನೆಯೆಂದು ತಿಳಿದರೂ, ಇದರಷ್ಟು ಸುಂದರವಾದ ಕವಿವರ್ಣನೆಯು ಮಿಕ್ಕ ಕಡೆಗೆ ಸಿಕ್ಕುವುದು ಅಪರೂಪ. ಆದರೆ, ಇದು ಕೇವಲ ಕವಿವರ್ಣನೆಯಾಗಿದ್ದರೆ ಗೀತೆಗೆ ಇಷ್ಟು ಮಹತ್ವವು ಬರುವ ಕಾರಣವೇ ಇದ್ದಿಲ್ಲ. ಅಲ್ಲ, ಇದು ಕವಿವರ್ಣನೆಯಲ್ಲ. ಅರ್ಜುನನ ದಿವ್ಯಚಕ್ಷುಗಳಿಗೆ ಪ್ರತ್ಯಕ್ಷವಾಗಿ ಕಂಡ ರೂಪವು ಅದು. ಪ್ರಹ್ಲಾದನಿಗೆ ಕಂಭದಲ್ಲಿಯೇ ಉಗ್ರನಾರಸಿಂಹನು ಕಾಣಲಿಲ್ಲವೆ? ಅದಕ್ಕಿಂತಲೂ ವಿಲಕ್ಷಣವಾದ ವಿಶ್ವರೂಪವನ್ನು ಅರ್ಜುನನು ಕಂಡಿದ್ದಾನೆ. ಯಶೋದೆಗೆ ಶ್ರೀಕೃಷ್ಣನು ಬಾಯಿ ತೆರೆದಾಗ ಆ ವಿಶ್ವರೂಪವು ಕಂಡಿದೆ. ಇರಲಿ. ಸನಾತನ ಧರ್ಮದಲ್ಲಿ ವಿಶ್ವಾಸವಿದ್ದವರು ಮಾತ್ರ ಇದನ್ನು ನಂಬುವರು. ಮಿಕ್ಕವರು ನಂಬಲಿ ಬಿಡಲಿ, ಅದು ಕೇವಲ ಕವಿಕಲ್ಪನೆಯೆಂದು ತೆಗೆದುಕೊಂಡರೂ ಕೂಡ, ಅದರಿಂದ ಮನುಷ್ಯನು ಕಲಿಯಬಹುದಾದ ಬೋಧವು ಬಹಳಿರುತ್ತದೆ. ಅದನ್ನು ತೆಗೆದುಕೊಂಡರೂ ಸಾಕು. ಗೀತೆಯ ವೈಶಿಷ್ಟ್ಯವೆ ಇದು. ಅದರಲ್ಲಿಯ ಅನೇಕ ಗಹನತತ್ವಗಳನ್ನು ಪೂರಾ ನಂಬದವರಿಗೂ ಕೂಡ, ಅದು ಅತ್ಯಂತ ಉಪಯೋಗವುಳ್ಳದ್ದಾಗಿರುತ್ತದೆ. ಅದರಲ್ಲಿಯ ಸಾಮಾನ್ಯ ನೀತಿಯ ಮಾತುಗಳು ಸರ್ವರಿಗೂ ಉಪಯೋಗವುಳ್ಳವಿರುತ್ತವೆ. ಕುಟುಂಬಸೇವೆ ಮೊದಲ್ಗೊಂಡು ಅಖಿಲಭೂತಹಿತದವರೆಗೆ ಅದರಲ್ಲಿ ಮೆಟ್ಟಿಲುಗಳಿರುತ್ತವೆ. ಅವರವರು ಅವರವರ ಯೋಗ್ಯತೆಯ ಸಾಧನದ ಮೆಟ್ಟಿಲನ್ನು ಏರಬಹುದು. ಇರಲಿ. ಇಲ್ಲಿ ಶ್ರೀಕೃಷ್ಣನು ತೋರಿಸಿದ ವಿಶ್ವರೂಪವು ಮಾಯಾರೂಪವೋ ಹೇಗೆ ಎಂಬ ಬಗ್ಗೆ ಮತ ಭೇದವಿದೆ. ಅದು ಗಹನ ವಿಷಯವಿರುವುದರಿಂದ ಈಗ ಅದರ ಚರ್ಚೆ ಬೇಡ.

ಆತನ ವಿಶ್ವರೂಪವು ಸಾವಿರಾರು ಬಣ್ಣಗಳುಳ್ಳದ್ದು, ಸಾವಿರಾರು ಆಕಾರಗಳುಳ್ಳದ್ದು ರೂಪಗಳುಳ್ಳದ್ದು. ಅದಕ್ಕೆ ಲೆಕ್ಕವಿಲ್ಲದಷ್ಟು ಮುಖಗಳು, ಲೆಕ್ಕವಿಲ್ಲದಷ್ಟು ಕಣ್ಣುಗಳು, ಲೆಕ್ಕವಿಲ್ಲದಷ್ಟು ತೋಳುಗಳು, ಲೆಕ್ಕವಿಲ್ಲದಷ್ಟು ತೊಡೆಗಳು, ಲೆಕ್ಕವಿಲ್ಲದಷ್ಟು ಕೈಕಾಲುಗಳು, ಲೆಕ್ಕವಿಲ್ಲದಷ್ಟು

ಹೊಟ್ಟೆಗಳು, ವಿಶ್ವರೂಪವನ್ನು ಧರಿಸಿದ ಆ ಪರಮಾತ್ಮನು ದಿವ್ಯವಾದ ಆಭರಣಗಳನ್ನು ಧರಿಸಿದ್ದನು, ದಿವ್ಯವಾದ ಆಯುಧಗಳು ಆತನ ಕೈಯಲ್ಲಿ; ದಿವ್ಯವಾದ ಮಾಲೆಗಳು ಆತನ ಕೊರಳಲ್ಲಿ; ಆತನು ದಿವ್ಯವಾದ ಗಂಧವನ್ನು ಮೈಗೆ ಲೇಪಿಸಿಕೊಂಡಿದ್ದನು. ದ್ವಾದಶಾದಿತ್ಯರು, ಅಷ್ಟವಸುಗಳು, ಏಕಾದಶರುದ್ರರು ಅಶ್ವಿನೀ ದೇವತೆಗಳು, ಮರುದ್ಗಣವು, ಋಷಿಗಳು, ಗಂಧರ್ವರು, ಬ್ರಹ್ಮ ಈಶರು ಯಾವತ್ತು ದೇವತೆಗಳು, ದಿವ್ಯವಾದ ಉರಗಗಳು, ಪ್ರಾಣಿ ವಿಶೇಷಗಳು ಇವೇ ಮುಂತಾದವುಗಳೆಲ್ಲವೂ ಆ ದೇವದೇವನ ಶರೀರದ ಒಂದು ಮೂಲೆಯಲ್ಲಿ ಅಡಗಿದ್ದವು. ನಭೋಮಂಡಲದಲ್ಲಿ ಸಹಸ್ರಾವಧಿ ಸೂರ್ಯರು ಏಕಕಾಲಕ್ಕೆ ಉದಿತವಾದರೆ ಹೇಗೆ ಝುಗಝುಗಿಸಬೇಕೋ ಹಾಗೆ ಮಹಾತ್ಮನ ಕಾಂತಿ !

**ಅಯ್ಯಾ ತನ್ನ ನಿಜದ ಬೆಳಗಿನ ಮುಂಭಾಗದಲಿ**
**ಅನಂತಕೋಟಿ ಬ್ರಹ್ಮರುತ್ಪತ್ತಿ ಸ್ಥಿತಿಲಯಗಳು**

-ವಚನಶಾಸ್ತ್ರ

ಚಂದ್ರಸೂರ್ಯರು ಆತನ ನೇತ್ರದಲ್ಲಿ; ಧಗಧಗಿಸುವ ಅಗ್ನಿಯು ಆತನ ಮುಖ; ಆತನ ತೇಜಸ್ಸು ವಿಶ್ವವೆಲ್ಲವನ್ನೂ ಸುಡುವಂಥದು; ಆತನ ತೇಜೋರಾಶಿಯು ದಿಕ್ಕು ದಿಕ್ಕುಗಳನ್ನೆಲ್ಲ ಬೆಳಗುತ್ತಿತ್ತು. ಭೂಮ್ಯಾಕಾಶಗಳ ನಡುವಿನ ಭಾಗವೆಲ್ಲವೂ ಆತನಿಂದ ತುಂಬಿತ್ತು. ಆತನ ರೂಪಕ್ಕೆ ಆದಿ ಇಲ್ಲ, ಮಧ್ಯವಿಲ್ಲ, ಅಂತವಿಲ್ಲ; ಆತನ ಗುಣಗಳಿಗೂ ಆದಿ ಇಲ್ಲ, ಮಧ್ಯವಿಲ್ಲ, ಅಂತವಿಲ್ಲ.

ಆ ವಿಶ್ವರೂಪನು ತಲೆಯಲ್ಲಿ ಕಿರೀಟ, ಕೈಯಲ್ಲಿ ಗದೆ ಮತ್ತು ಚಕ್ರ ಇವುಗಳನ್ನು ಧರಿಸಿದ್ದನು. ಆತನ ಆಗಿನ ಆ ಉಗ್ರವಾದ ರೂಪವನ್ನು ನೋಡಿ ಮೂರೂ ಲೋಕಗಳು ಗದಗದನೆ ನಡುಗುತ್ತಿದ್ದವು. ಆತನ ಆ ಭಯಂಕರವಾದ ಕೋರೆದಾಡೆಗಳಲ್ಲಿ ಧೃತರಾಷ್ಟ್ರ ಪುತ್ರರೂ ಅರಸರ ತಂಡಗಳೂ ಭೀಷ್ಮದ್ರೋಣ ಕರ್ಣ ಮುಂತಾದ ಕಡುಗಲಿಗಳೂ ಸಿಕ್ಕು ನುಚ್ಚು ನುರಿಯಾಗುತ್ತಿದ್ದರು. ಕೋರೆಹಲ್ಲುಗಳಿಂದ ಕರಾಲವಾದ ಮತ್ತು ಭಯಂಕರವಾದ ಆತನ ಉರಿಯುವ ಬಾಯಿಯಲ್ಲಿ ದೀಪದ ಹುಳಗಳು ಭರದಿಂದ ಹೋಗಿ ಉರಿಯುವ ಕಿಚ್ಚಿನಲ್ಲಿ ಬೀಳುವಂತೆ ಲಕ್ಷಾವಧಿ ಜನರು ಹೋಗಿ ಬೀಳುತ್ತಿದ್ದರು. ಆತನು ತನ್ನ ಉರಿಯುವ ನಾಲಗೆಗಳಿಂದ ಸುತ್ತಲಿನ ಜನರೆಲ್ಲರನ್ನೂ ನೆಕ್ಕುತ್ತಿದ್ದನು. ಲೋಕಗಳೆಲ್ಲವೂ ಆತನ ತೇಜಸ್ಸಿನಿಂದ ಭಸ್ಮವಾಗುತ್ತಿದ್ದವು! ಅಂಥ ಆ ಅಕ್ರಾಳ ವಿಕ್ರಾಳವಾದ ರೂಪವನ್ನು ನೋಡಿ ಅರ್ಜುನನು ಬೆರಗಾಗಿ ಭೀತ ಭೀತನಾಗಿ 'ಅಯ್ಯಾ ನೀನು ಯಾರು?' ಎಂದು ಕೇಳಿದನು.

ಆಗ ಆತನು ನಾನು ಕಾಲರೂಪಿ ಪರಮಾತ್ಮನು, ಈಗಿನ ನನ್ನ ಉದ್ದೇಶವು ಈ ಲೋಕಗಳನ್ನೆಲ್ಲ ಸಂಹರಿಸಿ, ಜಗತ್ತನ್ನು ಉದ್ಧಾರ ಮಾಡುವುದು ಇರುತ್ತದೆ. ಈ ಜನರೆಲ್ಲರನ್ನೂ

ನುಂಗುವುದಕ್ಕೆ ಈಗ ನಾನು ಪ್ರವೃತ್ತನಾಗಿರುವೆನು. ಈ ಕೌರವ ಪಾಂಡವ ಸೇನೆಯೊಳಗಿನ ವೀರರೆಲ್ಲರನ್ನೂ ಈಗ ಭಕ್ಷಿಸಲಿಕ್ಕೆ ಬಂದಿರುವೆನು. ದ್ರೋಣ, ಭೀಷ್ಮ, ಜಯದ್ರಥ ಕರ್ಣ ಮುಂತಾದ ವೀರರೆಲ್ಲರೂ ನನ್ನಿಂದಲೇ ಕೊಲ್ಲಲ್ಪಟ್ಟಿರುವರು. ನೀನು ಏಳು, ಅವರನ್ನು ಕೊಲ್ಲಲಿಕ್ಕೆ ನಿಮಿತ್ತ ಮಾತ್ರನಾಗು ಎಂದು ಹೇಳಿದನು.

ಆಗ, ಅರ್ಜುನನಿಗೆ ಆ ವಿಶ್ವರೂಪದ ನಿಜವಾದ ಉದ್ದೇಶವು ಏನೆಂಬುದು ಚೆನ್ನಾಗಿ ಹೊಳೆಯಿತು. ಮತ್ತು ಆತನು ಆ ವಿಶ್ವರೂಪನನ್ನು ಸ್ತೋತ್ರ ಮಾಡಲಿಕ್ಕೆ ಪ್ರಾರಂಭಿಸಿದನು. ಎಂತೆಂದರೆ 'ಎಲೈ ಹೃಷೀಕೇಶನೇ, ನಿನ್ನ ಕೀರ್ತಿಯನ್ನು ಕೇಳಿ ಜಗವೆಲ್ಲವೂ ಹರುಷಗೊಳ್ಳುವುದು, ರಕ್ಕಸರು ಭೀತಿಗೊಂಡು ಓಡಿಹೋಗುವರು, ಎಲೈ ಜಗನ್ನಿವಾಸನೇ, ನೀನು ಅಕ್ಷರನು, ಕಾರ್ಯಕಾರಣಗಳನ್ನು ಮೀರಿದವನು, ಆದಿದೇವನು, ಪುರಾಣ ಪುರುಷನು, ಪರಮಾಧಾರನು. ನೀನೇ ವಾಯುವು, ಅಗ್ನಿಯು, ವರುಣನು, ಚಂದ್ರನು, ಬ್ರಹ್ಮನು, ನಿನಗೆ ಸಾವಿರಾರು ಬಾರಿ ನಮಸ್ಕಾರ; ನಿನಗೆ ಹಿಂದೆ ನಮಸ್ಕಾರ ಮುಂದೆ ನಮಸ್ಕಾರ, ಮೇಲೆ ನಮಸ್ಕಾರ, ಕೆಳಗೆ ನಮಸ್ಕಾರ, ಎಲ್ಲೆಡೆಗೂ ನಮಸ್ಕಾರ. ನಿನ್ನ ನಿಜ ಮಹಿಮೆಯನ್ನು ಅರಿಯದೆ ನಾನು ನಿನಗೆ 'ಎಲೈ ಕೃಷ್ಣಾ ಗೆಳೆಯಾ' ಎಂದು ಕರೆದೆನು. ಹೀಗೆ ನಿನ್ನೊಡನೆ ಹೆಚ್ಚಿನ ಸಲುಗೆಯನ್ನು ತೆಗೆದುಕೊಂಡ ಬಗ್ಗೆ ನನ್ನನ್ನು ಕ್ಷಮಿಸು.

**ನಿನ್ನ ಬೊಮ್ಮ ಮೂರುತಿಗೆ ನಮೋ ನಮೋ**
**ನಿನ್ನ ರುದ್ರ ಮೂರುತಿಗೆ ನಮೋ ನಮೋ**
**ನಿನ್ನ ಇಂದ್ರಮೂರುತಿಗೆ ನಮೋ ನಮೋ**
**ನಿನ್ನ ಚಂದ್ರಮೂರುತಿಗೆ ನಮೋ ನಮೋ**
**ನಿನ್ನ ಸ್ಥಾವರ ಮೂರುತಿಗೆ ನಮೋ ನಮೋ**
**ನಿನ್ನ ಜಂಗಮ ಮೂರುತಿಗೆ ನಮೋ ನಮೋ**

-ಪುರಂದರವಿಠಲ

**ನಿನ್ನ ವಿಶ್ವಮೂರುತಿಗೆ ನಮೋ ನಮೋ**

-ಪುರಂದರದಾಸರು

**ಎತ್ತೆತ್ತ ನೋಡಿದಡತತ್ತ ನೀನೇ ದೇವಾ**

-ವಚನಶಾಸ್ತ್ರ

ಎಂದು ಮುಂತಾಗಿ ಸ್ತುತಿಸಿ ಆ ವಿಶ್ವರೂಪವನ್ನು ಬಹಳ ಹೊತ್ತಿನವರೆಗೆ ತನ್ನಿಂದ ನೋಡುವುದಾಗದ್ದರಿಂದ ಮೊದಲಿನ ತನ್ನ ಕೃಷ್ಣರೂಪವನ್ನು ತೋರಿಸಲಿಕ್ಕೆ ಬೇಡಿಕೊಂಡನು. ಆ ಮೇರೆಗೆ ಶ್ರೀಕೃಷ್ಣನು ಪುನಃ ಆ ರೂಪವನ್ನು ಧಾರಣಮಾಡಿದನು.

ತನ್ನ ವಿಶ್ವರೂಪ ದರ್ಶನವಾಗಲಿಕ್ಕೆ ಬಹಳ ಪುಣ್ಯಬೇಕೆಂದು ಹೇಳಿದನು. ವೇದ, ಯಜ್ಞ, ಅಧ್ಯಯನ, ದಾನ ತಪಸ್ಸು ಇವುಗಳಿಂದ ಆ ರೂಪವು ನೋಡಲಿಕ್ಕೆ ದೊರೆಯಲಾರದು. ಅನನ್ಯವಾದ ಭಕ್ತಿಯಿಂದಲೇ ಅಂಥ ರೂಪವನ್ನು ನೋಡುವುದು ಸಾಧ್ಯವು.

**ಹರಿಗೋಲ ಬಿಸುಟು ಹೊಳೆಯ ಕಡವೆನೆಂದೆಂಬ**
**ತೆರನಲ್ಲವೇ ಭವಾಂಬುಧಿಯನೀ ತಪದಿಂದ |**
**ನೆರೆಲಂಘನವ ಮಾನೆಂಬ ಕರಪಿಡಿದು ಹಗ್ಗವನು ಬಿಟ್ಟು**

-ಸಮ್ಯಕ್ತ್ವ ಕೌಮುದಿ.

ಆದಕಾರಣ ಮನುಷ್ಯನು ಯಾವಾಗಲೂ ಪರಮಾತ್ಮ ವಿಷಯಕ ಕರ್ಮಗಳನ್ನು ಮಾಡುತ್ತಲೂ, ಆತನೇ ಸರ್ವೋತ್ತಮನೆಂದು ಭಾವಿಸುತ್ತಲೂ ಆತನಲ್ಲಿ ಅನನ್ಯವಾದ ಭಕ್ತಿಯನ್ನಿಟ್ಟು, ಸಂಗವನ್ನು ತೊರೆದು, ವೈರಭಾವವನ್ನು ಉಳಿದು ಇದ್ದರೆ ಆತನು ಪರಮಾತ್ಮನನ್ನು ಪಡೆಯುವನು.

ಈ ವಿಶ್ವರೂಪದ ಇಂಗಿತವನ್ನು ತಿಳಿಯುವುದು ಅತ್ಯಂತ ಕಠಿನ ಕೆಲಸ. ಅರ್ಜುನನು ಅಲ್ಲಿಯವರೆಗೆ ಜಗತ್ತೆಲ್ಲವೂ ಕೇವಲ ಸುಂದರವಾದದು, ನ್ಯಾಯವಾದುದು ಎಂದು ಭಾವಿಸಿದ್ದನು. ಪರಮಾತ್ಮನು ಈ ಜಗತ್ತನ್ನು ಏಕವಿಧವಾಗಿ ಹುಟ್ಟಿಸಿರುವದಿಲ್ಲ. ಆತನು ಸುಂದರವಾದುದನ್ನು ಹೇಗೆ ಹುಟ್ಟಿಸಿರುವನೋ ಹಾಗೆಯೇ ಭಯಂಕರವಾದುದನ್ನು ಹುಟ್ಟಿಸಿದವನೂ ಆತನೇ. ಸುಂದರವಾದ ನದಿ ಪರ್ವತಗಳನ್ನು ಹುಟ್ಟಿಸಿದವನೂ ಆತನೇ, ಭಯಂಕರವಾದ ಭೂಕಂಪ ಜ್ವಾಲಾಮುಖಿಗಳನ್ನು ಹುಟ್ಟಿಸುವವನೂ ಆತನೇ. ನಾವು ನಮಗೆ ಯಾವಾಗಲೂ ಒಳ್ಳೆಯದೇ ದೊರೆಯಬೇಕು, ಸುಂದರವಾದುದೇ ನಮ್ಮ ಪಾಲಿಗೆ ಬರಬೇಕು, ಎಂದು ಬಯಸುವುದು ಮೂರ್ಖತನವು. ಹಾಗಿದ್ದರೆ ಜಗತ್ತೇ ನಡೆಯಲಿಕ್ಕಿಲ್ಲ. ಜಗತ್ತಿನ ಆಟವೆಲ್ಲವೂ ನಡೆದಿರುವುದು ಈ ವೈವಿಧ್ಯದ ಮೇಲೆ ಕೇವಲ ಸಾತ್ವಿಕರಿಂದ ಕೂಡಿದ ಜಗತ್ತು ಜಗತ್ತೇ ಅಲ್ಲ. ಹಾಗೆಯೇ ನಮ್ಮಿಂದ ಯಾವಾಗಲೂ ಸಾತ್ವಿಕವಾಗಿ ತೋರುವ ಕಾರ್ಯಗಳೇ ಆಗಬೇಕೆಂದು ಬಯಿಸುವುದೂ ತರವಲ್ಲ. ಸಾತ್ವಿಕರ ರಕ್ಷಣೆಯಾಗಲಿಕ್ಕೆ ಕೂಡ ರಾಜಸತಾಮಸರ ಭಕ್ಷಣ ಕಾರ್ಯವು ಅವಶ್ಯ. ಗೀತೆಯಲ್ಲಿಯ ಆಗಿನ ಕಾಲವು ಆ ಪ್ರಕಾರದ ಸರ್ವಭಕ್ಷಣದ ಕಾರ್ಯವಾಗಿತ್ತು. ಅರ್ಜುನನು ಆಗಿನ ಕಾಲಕ್ಕೆ ಅದಕ್ಕೆ ನಿಮಿತ್ತ ಮಾತ್ರನಾಗಿ ಮುಂದೆ ಬರಬೇಕೆಂದು ಪರಮಾತ್ಮನ ಸಂಕಲ್ಪವಿತ್ತು. ಆ ಭಯಂಕರವಾದ ದೃಶ್ಯವನ್ನು ನೋಡಿ ಅರ್ಜುನನು ಹಿಂದಕ್ಕೆ ಸರಿದಿದ್ದನು. ಹೀಗೆ ಹಿಂದೆ ಸರಿಯುವುದು ಉಚಿತವಲ್ಲ.

ಅದರ ಹೊಣೆಯು ನಿನ್ನ ಮೇಲೆ ಇಲ್ಲ, ನನ್ನ ಮೇಲೆ ಅದೆ ಎಂಬುದನ್ನರಿತು ಯುದ್ಧ ಮಾಡಿದರೆ ಪಾಪವಿಲ್ಲವೆಂದು ಶ್ರೀಕೃಷ್ಣನ ಉಪದೇಶ. ಕೋಪದಿಂದ ಯುದ್ಧ ಮಾಡಬೇಡ, ದ್ವೇಷದಿಂದ ಯುದ್ಧ ಮಾಡಬೇಡ, ಮತ್ಸರದಿಂದ ಯುದ್ಧ ಮಾಡಬೇಡ, ನನ್ನ ಪೂಜೆಯೆಂದು ಯುದ್ಧ ಮಾಡು, ಎಂದು ಶ್ರೀಕೃಷ್ಣನ ಉಪದೇಶ.

ಕರ್ಮವನ್ನು ಏಕೆ ಮಾಡಬೇಕೆಂಬುದಕ್ಕೆ ೩ನೆಯ ಅಧ್ಯಾಯದಲ್ಲಿ ಉತ್ತರ ಕೊಟ್ಟಿದ್ದನು. ಅಲ್ಲಿಯೇ ಘೋರವಾದ ಈ ಯುದ್ಧ ಕರ್ಮವನ್ನೇ ಏಕೆ ಮಾಡಬೇಕೆಂಬುದಕ್ಕೆ 'ಅದು ನಿನ್ನ ಸ್ವಧರ್ಮವು' ಎಂಬ ಕಾರಣವನ್ನು ಕೊಟ್ಟಿದ್ದನು. ಅದನ್ನೇ ಈ ಅಧ್ಯಾಯದಲ್ಲಿ ವಿಶ್ವರೂಪದ ಆಗಿನ ಉದ್ದೇಶವು ದುಷ್ಟಸಂಹಾರವಾಗಿದ್ದ ಕಾರಣ ಆ ಸಂಕಲ್ಪವನ್ನು ನೆರವೇರಿಸುವುದಕ್ಕೋಸ್ಕರ ಅರ್ಜುನನು ನಿಮಿತ್ತಮಾತ್ರನಾಗಿ ಮುಂದೆ ಬರಬೇಕೆಂದು ಶ್ರೀಕೃಷ್ಣನು ಹೇಳಿದ್ದಾನೆ.

೧೬ನೆಯ ಪ್ರಕರಣ

( ೧೨ನೆಯ ಅಧ್ಯಾಯದ ತಾತ್ಪರ್ಯ )

# ಸಾಧನ ನಿರ್ಣಯ

ಶ್ರೀಕೃಷ್ಣನು ಅರ್ಜುನನ್ನು ಒಂದೊಂದೇ ಮೆಟ್ಟಿಲಿನಲ್ಲಿ ಏರಿಸುತ್ತ, ೧೧ನೆಯ ಅಧ್ಯಾಯದಲ್ಲಿ ಕೊನೆಯ ಮೆಟ್ಟಲಿಗೆ ತಂದು ಮುಟ್ಟಿಸಿದ್ದಾನೆ. ತನ್ನನ್ನು ಪಡೆಯುವುದಕ್ಕೆ ಆತನು ಅನೇಕ ಸಾಧನಗಳನ್ನು ಹೇಳಿದನು. ಕರ್ಮಮಾಡುವುದರಿಂದ ಜ್ಞಾನವು ಪ್ರಾಪ್ತವಾಗುತ್ತದೆಂದೂ ಅಪರೋಕ್ಷಜ್ಞಾನವು ಮುಕ್ತಿಗೆ ಸಾಧನವೆಂದೂ ಹೇಳಿದನು. ಸಂನ್ಯಾಸವು ಒಂದು ಸಾಧನ, ಯೋಗವೂ ಒಂದು ಸಾಧನ, ಧ್ಯಾನವೂ ಒಂದು ಸಾಧನ, ಭಕ್ತಿಯೂ ಒಂದು ಸಾಧನ. ಭಕ್ತಿಯಲ್ಲಿಯೂ ಅನ್ಯದೇವತೆಗಳ ಭಕ್ತಿಯೂ ಒಂದು ಸಾಧನ, ಆರ್ತಭಕ್ತಿಯೂ ಒಂದು ಸಾಧನ, ಜಿಜ್ಞಾಸಭಕ್ತಿಯೂ ಒಂದು ಸಾಧನ, ಅಥಾರ್ಥಿಭಕ್ತಿಯೂ ಒಂದು ಸಾಧನ, ಜ್ಞಾನಯುಕ್ತ ಭಕ್ತಿಯೂ ಒಂದು ಸಾಧನವೆಂದು ಹೇಳಿದನು. ಈ ಅಧ್ಯಾಯದಲ್ಲಿ, ಇವೆಲ್ಲ ಸಾಧನಗಳಲ್ಲಿ ಯಾವುದು ಶ್ರೇಷ್ಠವೆಂಬುದರ ಕೊನೆಯ ನಿರ್ಣಯವನ್ನು ಕೊಟ್ಟಿರುವನು.

ವೇದಗಳಲ್ಲಿ ಪರಮಾತ್ಮನ ಭಕ್ತಿಯು ಹೇಗೆ ಮುಕ್ತಿಗೆ ಕಾರಣವೋ ಹಾಗೆ ಅವ್ಯಕ್ತಳಾದ ಲಕ್ಷ್ಮಿಯ ಭಕ್ತಿಯೂ ಮುಕ್ತಿಗೆ ಕಾರಣವೆಂದು ಹೇಳಿದೆ. ಆದರೆ ಲಕ್ಷ್ಮಿಯ ಭಕ್ತಿಗಿಂತಲೂ ಪರಮಾತ್ಮನ ಭಕ್ತಿಯೇ ಶ್ರೇಷ್ಠವೆಂದು ಇಲ್ಲಿ ಹೇಳಿದೆ.

೧೨ನೆಯ ಅಧ್ಯಾಯದಲ್ಲಿಯ ಮೊದಲನೆಯ ಪ್ರಶ್ನೆಯೆಂದರೆ ಅವ್ಯಕ್ತೋಪಾಸನೆ ಹೆಚ್ಚಿನದೋ ಪರಮಾತ್ಮನ ಉಪಾಸನೆ ಹೆಚ್ಚಿನದೋ ಎಂಬುದು ಅದಕ್ಕೆ ಶ್ರೀಕೃಷ್ಣನು ಕೊಟ್ಟ ಉತ್ತರವು ತನ್ನ ಉಪಾಸನೆ ಹೆಚ್ಚಿನದೆಂಬುದು. ಇವುಗಳ ಬಗ್ಗೆ ಯಾರಲ್ಲಿಯೂ ಮತಭೇದವಿಲ್ಲ. ಆದರೆ, ಗೀತೆಯಲ್ಲಿ ಉಲ್ಲೇಖಿಸಿದ ಈ ಅವ್ಯಕ್ತೋಪಾಸನೆ ಎಂದರೆ ಯಾವ ಉಪಾಸನೆಯೆಂಬ ವಿಷಯದಲ್ಲಿ ಶ್ರೀಮಧ್ವಾಚಾರ್ಯರಲ್ಲಿಯೂ ಮಿಕ್ಕವರಲ್ಲಿಯೂ ಅತ್ಯಂತ ಮತಭೇದವಿದೆ. ಅವ್ಯಕ್ತೋಪಾಸನೆಯೆಂದರೆ ನಿರ್ಗುಣಬ್ರಹ್ಮನ ಉಪಾಸನೆಯೆಂದೂ ನನ್ನ ಉಪಾಸನೆ ಎಂದರೆ ಸಗುಣ ಬ್ರಹ್ಮನ ಉಪಾಸನೆಯೆಂದೂ ಅನೇಕರು ಅರ್ಥಮಾಡಿದ್ದಾರೆ. ಆದರೆ, ಹೀಗೆ ಅರ್ಥಮಾಡಿದರೆ ನನ್ನ ಉಪಾಸನೆಯೇ ಹೆಚ್ಚಿನದು ಎಂಬುದಾಗಿ ಘಂಟಾಘೋಷವಾಗಿ ಹೇಳಿದ್ದರ ಗತಿಯೇನು? ಆ ನಿರ್ಣಯಕ್ಕೆ ಬಾಧೆ ಬರುತ್ತದೆಂದು ತಿಳಿದು ಶ್ರೀಮಧ್ವಾಚಾರ್ಯರು ಅವ್ಯಕ್ತೋಪಾಸನೆಯೆಂದರೆ ಮಹಾಲಕ್ಷ್ಮಿಯ ಉಪಾಸನೆಯೆಂದು ಅರ್ಥ ತೆಗೆದುಕೊಂಡಿದ್ದಾರೆ.

ಮತ್ತು ಅವ್ಯಕ್ತಪದಕ್ಕೆ ಮಹಾಲಕ್ಷ್ಮಿಯೆಂದು ಅರ್ಥ ಮಾಡುವುದಕ್ಕೆ ಶ್ರುತಿಸ್ಮೃತ್ಯಾದಿ ಪ್ರಮಾಣಗಳನ್ನು ಕೊಟ್ಟಿರುವರು. ಮಿಕ್ಕವರು ಈ ತೊಡಕನ್ನು ಹೇಗೆ ಬಿಡಿಸಲಿಕ್ಕೆ ಯತ್ನಿಸಿರುವರೆಂಬುದನ್ನು ನೋಡುವ. ಬ್ರಹ್ಮನಲ್ಲಿ ಎರಡು ಭೇದ. (೧) ನಿರ್ಗುಣಬ್ರಹ್ಮ (೨) ಸಗುಣಬ್ರಹ್ಮ ನಿರ್ಗುಣೋಪಾಸನೆ ಅತ್ಯಂತ ಕಠಿಣ. ಆದಕಾರಣ ಸಗುಣ ಬ್ರಹ್ಮಪಾಸನೆ ಹೆಚ್ಚಿನದೆಂದು ಶ್ರೀಕೃಷ್ಣನು ಹೇಳಿದ್ದಾನೆಂದು ಅವರ ತಾತ್ಪರ್ಯ. ಆದರೆ, ಇಲ್ಲಿ ಯಾವುದು ಹೆಚ್ಚಿನದು ಎಂಬ ಪ್ರಶ್ನೆಯಿರುವುದಲ್ಲದೆ ಯಾವುದು ಸುಲಭವು ಎಂಬ ಪ್ರಶ್ನೆಯಿರುವುದಿಲ್ಲವೆಂದೂ ಶ್ರೀಮಧ್ವಾಚಾರ್ಯರ ಅಂಬೋಣ. ಇದಲ್ಲದೆ ಇಲ್ಲಿರುವ ಪ್ರಶ್ನೆಯಲ್ಲಿ ಯಾವ **ಇಬ್ಬರು ಬೇರೆ ಬೇರೆ ಪುರುಷರಲ್ಲಿ** ಯಾರ ಉಪಾಸನೆ ಹೆಚ್ಚಿನದೆಂಬ ಪ್ರಶ್ನೆಯಿರುತ್ತದಲ್ಲದೆ **ಒಬ್ಬನೇ ಪುರುಷನ** ನಿರ್ಗುಣ ಮತ್ತು ಸಗುಣ ಉಪಾಸನೆಗಳಲ್ಲಿ ಯಾವುದು ಹೆಚ್ಚಿನದು ಎಂಬ ಪ್ರಶ್ನೆಯಿರುವುದಿಲ್ಲವೆಂದು ಶ್ರೀಮಧ್ವಾಚಾರ್ಯರ ಆಕ್ಷೇಪ. ಆದಕಾರಣವೇ ಅವರು ಅದಕ್ಕೆ ಹೊಸರೀತಿಯಿಂದ ಅರ್ಥಕೊಟ್ಟು, ಆ ಅರ್ಥಕ್ಕೆ ಪ್ರಮಾಣಗಳನ್ನು ಕೊಟ್ಟಿರುವರು. ಮೇಲಾಗಿ **ನನಗೆ** ಯಾವ ಉಪಾಸನೆ ಹೆಚ್ಚು ಎಂದು ಪ್ರಶ್ನೆಯಿರುವುದಿಲ್ಲ. ಅರ್ಜುನನ ಪ್ರಶ್ನೆಯು ಸಾಮಾನ್ಯ ಪ್ರಶ್ನೆಯು, ಉತ್ತರವೂ ಸಾಮಾನ್ಯ ಉತ್ತರವು. ಇರಲಿ. ಸಗುಣ ನಿರ್ಗುಣವೆಂಬವು ಒಬ್ಬ ಪುರುಷನಲ್ಲಿಯ ಒಳಭೇದಗಳು ಹಾಗೆ ಉತ್ತರ ಕೊಡುವುದಿದ್ದರೆ, ಕೆಲವರಿಗೆ ಸಗುಣೋಪಾಸನೆಗೆ ಮಾತ್ರ ಅಧಿಕಾರ ಕೆಲವರಿಗೆ ನಿರ್ಗುಣೋಪಾಸನೆಗೆ ಅಧಿಕಾರ. ನಿರ್ಗುಣೋಪಾಸನೆಗೆ ಹೆಚ್ಚಿನ ಅಧಿಕಾರಬೇಕು ಎಂದು ಉತ್ತರ ಕೊಡಬಹುದಾಗಿತ್ತು.

ನಾವು ಮತಭೇದವನ್ನು ನಿರ್ದೇಶಿಸಿರುವೆವು. ಅವರವರು ವಿಚಾರ ಮಾಡಿ, ಇವೆರಡರಲ್ಲಿ ತಮಗೆ ಯಾವುದು ಸರಿಯೊ ಅದನ್ನು ಗ್ರಹಣ ಮಾಡಬಹುದು. ಆದರೆ ಈ ವಿಷಯವು ಹೇಗಿದ್ದರೂ ಒಂದು ಮಾತು ಮಾತ್ರ ಸೂರ್ಯಪ್ರಕಾಶದಷ್ಟು ಸ್ಪಷ್ಟವಾಗಿರುತ್ತದೆ. ಅದೇನೆಂದರೆ ಶ್ರೀಕೃಷ್ಣನು ಗೀತೆಯಲ್ಲಿ ಭಗವಂತನ ಉಪಾಸನೆಯು ( ಕಾರಣವು ಯಾವುದೇ ಇರಲಿ ) ಶ್ರೇಷ್ಠವೆಂದು ಹೇಳಿರುವನೆಂಬುದು. "ನನ್ನಲ್ಲಿ ಮನಸ್ಸನಿತ್ತು, ಬುದ್ಧಿಯನ್ನಿತ್ತು, ಎಂದರೆ, ನನ್ನಲ್ಲಿ ವಾಸಮಾಡುವಿ" ಎಂದು ಆತನ ಉಪದೇಶ. ಈ ಉಪದೇಶದಂತೆ ನಾವೆಲ್ಲರೂ ನಡೆಯುವುದೇ ನಮ್ಮ ಕರ್ತವ್ಯ.

ಈ ಅಧ್ಯಾಯದಲ್ಲಿ ಬಂದಿರುವ ಎರಡನೆಯ ವಿಷಯವೆಂದರೆ, ಸಾಧನಗಳಲ್ಲಿಯ ತಾರತಮ್ಯ, ಪರಮಾತ್ಮನಲ್ಲಿ ದೃಢವಾದ ಚಿತ್ತವನ್ನಿಡಲು ಬಾರದವರು ಏನು ಮಾಡಬೇಕು, ಎಂದು ಕೇಳಿದರೆ ಅಂಥವರು ಮುಂಚೆ ಹಾಗೆ ಆತನಲ್ಲಿ ಚಿತ್ತವನ್ನು ಇಡುವ ಅಭ್ಯಾಸವನ್ನು ಮಾಡಬೇಕು. ಒಮ್ಮೆಲೆ ಅದು ನಿಲ್ಲುವುದು ಸಾಧ್ಯವಿಲ್ಲ; ಆದಕಾರಣ ಪ್ರತ್ಯಾಹಾರದಿಂದ ಅಂದರೆ ಚಿತ್ತವು ಬೇರೆ ಕಡೆಗೆ ಎಳೆಯಲ್ಪಟ್ಟರೆ, ಅದನ್ನು ಎಳೆದುಕೊಂಡು ಬಂದು ಪರಮಾತ್ಮನಲ್ಲಿ ನಿಲಿಸುತ್ತ ಹೋಗಬೇಕು. ಮುಂದೆ ಅದು ಆತನಲ್ಲಿ ಸಹಜವಾಗಿ ನಿಲ್ಲಲು ಸಾಧ್ಯವಾಗುತ್ತದೆ. ಇದು ಕೂಡ ನಿಮಗೆ ಮಾಡಲಿಕ್ಕೆ

ಬಾರದಿದ್ದರೆ, ಪರಮಾತ್ಮ ವಿಷಯಕವಾದ ಕರ್ಮಗಳನ್ನು ಮಾಡುತ್ತ ಹೋಗಬೇಕು. ಹಾಗೆ ಕರ್ಮಗಳನ್ನು ಮೇಲಿಂದಮೇಲೆ ಮಾಡುವುದರಿಂದ, ದೇವರ ಕಡೆಗೆ ಮೇಲಿಂದಮೇಲೆ ಮನಸ್ಸು ಹೋಗಿ ಮುಂದೆ ಅದನ್ನು ಕೆಲವು ಕಾಲದವರೆಗೆ ಸ್ಥಿರವಾಗಿ ನಿಲ್ಲಿಸಲು ಅನುಕೂಲವಾಗುತ್ತದೆ. ಕರ್ಮಗಳನ್ನು ಮಾಡುವಾಗ ಆ ಕರ್ಮದಿಂದ ಪರಮಾತ್ಮನು ಪ್ರೀತನಾಗಲಿ ಎಂದು ಸಂಕಲ್ಪವನ್ನು ಮಾಡುತ್ತಿರಬೇಕು. ಇದನ್ನು ಮಾಡುವುದು ಕೂಡ ಸಾಧ್ಯವಾಗದಿದ್ದರೆ, ಪರಮಾತ್ಮಯೋಗವನ್ನು ಅವಲಂಬಿಸಬೇಕು ಅಂದರೆ ಮೊದಲು ಕರ್ಮಗಳನ್ನು ಮಾಡುವಂತೆ ಮಾಡಿ, ಕೊನೆಗಾದರೂ 'ಶ್ರೀಕೃಷ್ಣಾರ್ಪಣಮಸ್ತು' ಎನ್ನಬೇಕು. ಇದರ ಮೇಲಿಂದ, ಈ ಸಾಧನಗಳಲ್ಲಿ ಹೆಚ್ಚಿನ ಸಾಧನವು ಯಾವುದೆಂಬುದು ತಾನೇ ಗೊತ್ತಾಗುವುದು.

ಕರ್ಮಫಲತ್ಯಾಗಯುಕ್ತವಾದ ಧ್ಯಾನ

|

ಬರೀಧ್ಯಾನ

|

ಬರೀಜ್ಞಾನ

ಗೀತೆಯಲ್ಲಿ ಧ್ಯಾನಕ್ಕಿಂತ ಕರ್ಮಫಲ ತ್ಯಾಗವು ಹೆಚ್ಚಿನದೆಂದು ಮಾತ್ರವೇ ಹೇಳಿದೆ. ಆದರೆ, ಇಷ್ಟು ಹೊತ್ತಿನವರೆಗೆ ಹೇಳಿದುದರ ಮೇಲಿಂದ, ಕರ್ಮಫಲತ್ಯಾಗವು ಧ್ಯಾನಕ್ಕಿಂತ ಕಡಿಮೆಯದೆಂದೇ ಸಿದ್ಧವಾಗಿರುತ್ತದೆ. ಆದಕಾರಣ ಗೀತೆಯಲ್ಲಿ ಕರ್ಮಫಲತ್ಯಾಗಯುಕ್ತವಾದ ಧ್ಯಾನವು ಬರೀ ಧ್ಯಾನಕ್ಕಿಂತ ಹೆಚ್ಚಿನದೆಂದೇ ಅರ್ಥಮಾಡದೆ ಗತ್ಯಂತರವಿಲ್ಲ. ಅಥವಾ ಅದು ಕೇವಲ ಸ್ತುತಿಪರವು ಎಂದಾದರೂ ಹೇಳಬೇಕು.

ಈ ಅಧ್ಯಾಯದಲ್ಲಿ ಬಂದಿರುವ ಮೂರನೆಯ ವಿಷಯವೆಂದರೆ ಭಕ್ತನ ಮಿಕ್ಕ ಲಕ್ಷಣಗಳು. ಅಂದರೆ ಪರಮಾತ್ಮಭಕ್ತನಲ್ಲಿರುವ ಅನ್ಯ ಗುಣಗಳು. ಹಿಂದಕ್ಕೆ ಸ್ಥಿತಪ್ರಜ್ಞ. ಯೋಗಾರೂಢ ಮುಂತಾದವರಲ್ಲಿ ಇರತಕ್ಕ ಗುಣಗಳೇ ಇವು ಎಂದು ಸಾಮಾನ್ಯವಾಗಿ ಹೇಳಬಹುದು. ಅವು ಯಾವವೆಂದರೆ (೧) ಅದ್ವೇಷ (೨) ಮೈತ್ರಿ (೩) ಕರುಣಾ (೪) ನಿರ್ಮಮತ್ವ (೫) ನಿರಹಂಕಾರತ್ವ (೬) ಸುಖದುಃಖಸಮತ್ವ (೭) ಕ್ಷಮೆ (೮) ಸಂತುಷ್ಟಿ (೯) ಜಿತಮನಸ್ಸು (೧೦) ದೃಢನಿಶ್ಚಯ (೧೧) ಪರಮಾತ್ಮನಲ್ಲಿ ಮನಸ್ಸು ಬುದ್ಧಿಗಳನ್ನರ್ಪಿಸುವುದು (೧೨) ಜನರಿಗೆ ತಾನು ಬೇಸರಾಗದಿರುವುದು, ತಾನು ಅವರಿಗೆ ಬೇಸರಾಗದಿರುವುದು (೧೩) ಅನಪೇಕ್ಷೆಗೆ (೧೪) ಶುಚಿತ್ವ (೧೫) ದಕ್ಷತೆ (೧೬) ಉದಾಸೀನತ್ವ (೧೭) ಹರ್ಷ-ಕೋಪ-ಭಯ ಇವುಗಳಿಂದ ಉದ್ವಿಗ್ನವಾಗದಿರುವುದು (೧೮) ಶುಭಾಶುಭಸಮತೆ (೧೯) ಹಗೆ-ಗೆಳೆಯರಲ್ಲಿ, ಶೀತ-ಉಷ್ಣಗಳಲ್ಲಿ, ಸುಖದುಃಖಗಳಲ್ಲಿ ಸಮಬುದ್ಧಿ

(೨೦) ಹೊಗಳಿಕೆ-ತೆಗಳಿಕೆಗಳನ್ನು ಸಮವಾಗಿ ತಿಳಿಯುವುದು. (೨೧) ಮೌನ (೨೨) ಇದ್ದದ್ದರಲ್ಲಿ ಸಂತುಷ್ಟನಾಗಿರುವುದು. (೨೩) ಇಂಥಲ್ಲಿಯೇ ವಾಸಿಸಬೇಕೆಂಬ ನಿಯಮವಿಲ್ಲದಿರುವುದು (೨೪) ಸ್ಥಿರಬುದ್ಧಿ ಇವೇ ಮುಂತಾದವುಗಳು ಭಕ್ತನ ಲಕ್ಷಣಗಳು. ಆದರೆ ಎಲ್ಲಕ್ಕೂ ಹೆಚ್ಚಿನ ಭಕ್ತನು ಯಾವನೆಂದರೆ ಪರಮಾತ್ಮನು ಹೇಳಿದ ವಚನಗಳನ್ನು ಪಾಲಿಸುವವನು; ಆತನೇ ಸರ್ವೋತ್ತಮನೆಂದು ತಿಳಿಯುವ ಶ್ರದ್ಧಾಳುವಾದ ಭಕ್ತನು ಭಗವಂತನಿಗೆ ಎಲ್ಲಕ್ಕೂ ಪ್ರಿಯನು.

**ಆರೇನೆಂದರು ಓರಂತಿಪ್ಪುದೇ ಸಮತೆ, ಆರು ಜರಿದರು |**
**ಅವರೆನ್ನಮನದ ಕಳಿಪೊಯಳೆದರೆಂಬುದೇ ಸಮತೆ ||**

-ವಚನಶಾಸ್ತ್ರ P. ೧೨೯

೧೭ನೆಯ ಪ್ರಕರಣ

(೧೩ನೆಯ ಅಧ್ಯಾಯದ ತಾತ್ಪರ್ಯ)

# ಸರ್ವಾರ್ಥ ಸಂಕ್ಷೇಪ

ಹಿಂದಿನ ಹನ್ನೆರಡೂ ಅಧ್ಯಾಯಗಳಲ್ಲಿ ಬಂದಿರುವ ವಿಷಯಗಳು ೧೩ನೆಯ ಅಧ್ಯಾಯದಲ್ಲಿ ಸಂಕ್ಷೇಪವಾಗಿಯೂ ಬಿಡಿಬಿಡಿಯಾಗಿಯೂ ಕೊಡಲ್ಪಟ್ಟಿವೆ. ಪ್ರಥಮ ಷಟ್ಕದಲ್ಲಿ ಜ್ಞಾನಸಾಧನಗಳು ಹೇಳಲ್ಪಟ್ಟವು. ದ್ವಿತೀಯ ಷಟ್ಕದಲ್ಲಿ ಜ್ಞೇಯಸ್ವರೂಪವು ಹೇಳಲ್ಪಟ್ಟಿತು. ೭ನೆಯ ಅಧ್ಯಾಯದಲ್ಲಿ ಪರಾಪರ ಪ್ರಕೃತಿಗಳನ್ನು ಕುರಿತು ಹೇಳುವಾಗ ಕ್ಷೇತ್ರದ ವಿಷಯವು ಬಂದಿದೆ. ೨ನೆಯ ಅಧ್ಯಾಯದಲ್ಲಿ ಜೀವೇಶ್ವರ ವಿಷಯವು ಬಂದಿರುವುದು. ಇವೇ ಮುಂತಾದವುಗಳು ಈ ಅಧ್ಯಾಯದಲ್ಲಿ ಕ್ರೋಡೀಕರಿಸಲ್ಪಟ್ಟಿವೆ. ಅವುಗಳ ಕ್ರಮವು ಹೀಗೆ ಇದೆ. (೧) ಕ್ಷೇತ್ರ (೨) ಕ್ಷೇತ್ರಜ್ಞ (೩) ಜ್ಞಾನ ಅಥವಾ ಜ್ಞಾನಸಾಧನಗಳು (೪) ಸ್ತ್ರೀಯ (೫) ಪ್ರಕೃತಿ ಪುರುಷರು.

(೧) ಕ್ಷೇತ್ರ- ಕ್ಷೇತ್ರವೆಂದರೆ ಶರೀರವೆಂದು ಗೀತೆಯಲ್ಲಿ ಹೇಳಿರುವುದು. ಆದರೆ ಶರೀರವೆಂದರೆ ದೇಹವಷ್ಟೇ ಎಂದು ಅರ್ಥವಲ್ಲ. ಶರೀರದಲ್ಲಿ ಅಷ್ಟಧಾ ಪ್ರಕೃತಿಗಳು ಸಮಾವೇಶವಾಗುತ್ತವೆ. ಅವು ಯಾವುವೆಂದರೆ ಐದು ಪಂಚಮಹಾಭೂತಗಳು (೬) ಅಹಂಕಾರ (೭) ಬುದ್ಧಿ (೮) ಅವ್ಯಕ್ತತತ್ವ, ಹನ್ನೊಂದು ಇಂದ್ರಿಯಗಳು, ಐದು ಇಂದ್ರಿಯ ವಿಷಯಗಳು ಹೀಗೆ ಒಟ್ಟು ೨೪ ತತ್ವಗಳೆಲ್ಲವುಗಳಿಗೆ ಕೂಡಿ ಶರೀರ ಅಥವಾ ಕ್ಷೇತ್ರವೆಂದು ಹೆಸರು.

ಕ್ಷೇತ್ರದ ಬಗ್ಗೆ ತಿಳಿಯತಕ್ಕ ಮಾತುಗಳು ಯಾವುವೆಂದರೆ (೧) ಕ್ಷೇತ್ರದ ಸ್ವರೂಪ. ಅದನ್ನು ಮೇಲೆ ಕೊಟ್ಟ ಇದೆ. (೨) ಅದು ಎಷ್ಟು ಪ್ರಕಾರಗಳುಳ್ಳದ್ದು. (೩) ಅದರ ವಿಕಾರಗಳು ಯಾವವು. (೪) ಅದಕ್ಕೆ ಪ್ರೇರಕನು ಯಾರು. (೫) ಆ ಪ್ರೇರಕನ ಸ್ವರೂಪವೇನು. (೬) ಮತ್ತು ಆತನ ಪ್ರಭಾವವು ಎಷ್ಟು, ೧ನೆಯ ಪ್ರಶ್ನೆಗಂತೂ ಮೇಲೆ ಉತ್ತರವನ್ನು ಕೊಟ್ಟಿರುವದಷ್ಟೆ. ಆ ಬಳಿಕ ಮೂರನೆಯ ಪ್ರಶ್ನೆಗೆ ಅಂದರೆ ಕ್ಷೇತ್ರದ ವಿಕಾರಗಳು ಯಾವುವು ಎಂಬುದಕ್ಕೆ ಉತ್ತರವು ಕೊಡಲ್ಪಟ್ಟಿದೆ. (೧) ಇಚ್ಛೆ (೨) ದ್ವೇಷ (೩) ಸುಖ (೪) ದುಃಖ (೫) ದೇಹ (೬) ಚೇತನ (೭) ಧೈರ್ಯ ಇವು ಕ್ಷೇತ್ರದ ವಿಕಾರಗಳು.

ಕ್ಷೇತ್ರಕ್ಕೆ ಪ್ರೇರಕನು ಯಾರು ಮತ್ತು ಆತನ ಪ್ರಭಾವವು ಎಷ್ಟು ಎಂಬ ೫ ಮತ್ತು ೬ ನೆಯ ಪ್ರಶ್ನೆಗಳಿಗೆ ಉತ್ತರ ಕೊಡುವ ಮುಂಚೆ, ಜ್ಞಾನಸಾಧನಗಳು ಹೇಳಲ್ಪಟ್ಟಿವೆ. ಅವು ಯಾವುವೆಂದರೆ (೧) ಹೆಮ್ಮೆ ಇಲ್ಲದಿರುವುದು (೨) ಡಾಂಭಿಕತನವಿಲ್ಲದಿರುವುದು (೩) ಅಹಿಂಸೆ (೪) ಸಹನಶೀಲತೆ (೫) ಸರಳತನ (೬) ಆಚಾರ್ಯಸೇವೆ (೭) ಶುಚಿತ್ವ, ದೇಹಶುದ್ಧಿ, ಭಾವಶುದ್ಧಿ (೮) ಸ್ಥೈರ್ಯ (೯)

ಆತ್ಮಸಂಯಮನ (೧೦) ವಿಷಯ ವೈರಾಗ್ಯ (೧) ನಿರಹಂಕಾರತೆ (೧೨) ಜೀವನಿಗೆ ಉಂಟಾಗುವ ಹುಟ್ಟು, ಸಾವು ಮುಪ್ಪು, ರೋಗ ಇವು ದುಃಖಮೂಲಗಳೆಂದು ತಿಳಿಯುವುದು (೧೩) ಹೆಂಡರು ಮಕ್ಕಳು ಮನೆಮಾರುಗಳಲ್ಲಿ ಮೋಹವಿಲ್ಲದಿರುವುದು (೧೪) ಅವರಲ್ಲಿ ಅತಿ ಪ್ರೀತಿಯಿಲ್ಲದಿರುವುದು (೧೫) ಸಮಚಿತ್ತತ್ವ (೧೬) ಅನನ್ಯವಾದ ಭಕ್ತಿ (೧೭) ಏಕಾಂತವಾಸ (೧೮) ಜನಸಹವಾಸವು ಬೇಡೆನಿಸುವುದು (೧೯) ಅಧ್ಯಾತ್ಮ ಜ್ಞಾನದಲ್ಲಿ ಮಗ್ನನಾಗಿರುವುದು (೨೦) ಅಪರೋಕ್ಷಜ್ಞಾನಕ್ಕೋಸ್ಕರ ತತ್ವಜ್ಞಾನವನ್ನು ಕಲಿಯುವುದು. ಈ ಇಪ್ಪತ್ತು ಜ್ಞಾನಸಾಧನಗಳು. ಆತನು ಯಾರು ಎಂಬುದಕ್ಕೆ ಆತನು ಅಕ್ಷರಬ್ರಹ್ಮನು ಎಂಬುದೇ ಉತ್ತರ. ಆದರೆ ೪ನೇ ಪ್ರಶ್ನೆಗೆ ಉತ್ತರ ೧೩ನೇ ಶ್ಲೋಕ.

ಆ ಜ್ಞೇಯವಸ್ತುವಿನ ಸ್ವರೂಪವು ಯಾವುದೆಂಬ ಐದನೆಯ ಪ್ರಶ್ನೆಗೆ ಉತ್ತರವೇನೆಂದರೆ ಆತನು ಪರಬ್ರಹ್ಮನು ಎಂಬುದೇ ಉತ್ತರ. ಆರನೆಯ ಪ್ರಶ್ನೆಯಾದ ಆತನ ಪ್ರಭಾವವೇನು ಎಂಬ ಪ್ರಶ್ನೆಗೆ ಉತ್ತರವೇನೆಂದರೆ ಆತನು ಆದಿಯುಳ್ಳ ದೇಹ ಇಂದ್ರಿಯ ಮುಂತಾದ ಯಾವತ್ತು ಪದಾರ್ಥಗಳಿಂದ ಭಿನ್ನನಾದವನು, ಆತನು ಕಾರ್ಯಕಾರಣ ವಿಲಕ್ಷಣನು ಅಂದರೆ ಆತನು ಕಾರ್ಯನೂ ಅಲ್ಲ, ಕಾರಣನೂ ಅಲ್ಲ, ಎಲ್ಲೆಡೆಯಲ್ಲಿಯೂ ಕೈಕಾಲು, ಕಣ್ಣು ತಲೆ, ಮೋರೆ, ಕಿವಿಗಳುಳ್ಳವನು, ಸರ್ವವನ್ನೂ ವ್ಯಾಪಿಸಿರುವವನು, ಆತನು ಸರ್ವ ಇಂದ್ರಿಯಗಳನ್ನೂ ವಿಷಯಗಳನ್ನೂ ತಿಳಿಯತಕ್ಕ ಶಕ್ತಿಯುಳ್ಳವನು, ಆದರೆ ಸ್ವತಃ ತಾನು ಇಂದ್ರಿಯವಿಲ್ಲದಿರುವವನು, ಅನಾಸಕ್ತನು, ಆದರೂ ಎಲ್ಲವನ್ನೂ ಧಾರಣಮಾಡುವವನು, ನಿರ್ಗುಣನಾದರೂ ಗುಣಭೋಕ್ತೃವು. ಪ್ರಾಣಿಗಳ ಒಳಹೊರಗೆ ಇರುವವನು, ಚರನೂ ಅಚರನೂ ಅಹುದು. ಅತ್ಯಂತ ಸೂಕ್ಷ್ಮನಾಗಿದ್ದ ಕಾರಣ ತಿಳಿಯಲಿಕ್ಕೆ ಅಶಕ್ಯನು, ದೂರದಲ್ಲಿಯೂ ಸಮೀಪದಲ್ಲಿಯೂ ಕೂಡಿಯೇ ಇರತಕ್ಕವನು. ಭಿನ್ನ ಭಿನ್ನ ಪದಾರ್ಥಗಳಲ್ಲಿ ಭಿನ್ನನಾಗಿ ತೋರಿದರೂ ಭಿನ್ನನಲ್ಲ, ಪ್ರಾಣಿಗಳನ್ನು ಹುಟ್ಟಿಸುವವನು ಪೋಷಿಸುವವನು ಕೊಲ್ಲುವವನು ಆತನು, ಪ್ರಕಾಶಮಯ ಪದಾರ್ಥಗಳಿಗೆ ಪ್ರಕಾಶ ಕೊಡುವವನು, ಪ್ರಕೃತಿಯ ಆಚೆಗೆ ಇರುವವನು, ಜ್ಞಾನಮಯನು, ಜ್ಞೇಯವಸ್ತುವು, ಜ್ಞಾನಗಮ್ಯನು, ಎಲ್ಲರ ಹೃದಯ ಗುಹೆಯಲ್ಲಿ ಇರತಕ್ಕವನು.

ಇನ್ನು ಮುಂದೆ ಸಾಗುವಮುಂಚೆ ಆತನು ಪ್ರೇರಿಸುವ ವಿಷಯಗಳು ಯಾವುವೆಂಬುದನ್ನು ಹೇಳುತ್ತಾನೆ. ಹೇಗೆಂದರೆ ಆ ಪ್ರೇರ್ಯ ವಸ್ತುಗಳೆಂದರೆ (೧) ಪ್ರಕೃತಿ (೨) ಪುರುಷ ಇವರಿಬ್ಬರು. ಇವೆರಡೂ ಕ್ಷೇತ್ರದಲ್ಲಿ ಸಮಾವೇಶವಾಗುವ ವಸ್ತುಗಳೇ. ಈ ಪ್ರಕೃತಿಪುರುಷರ ವಿಷಯವಾಗಿ ಹೇಳತಕ್ಕದ್ದನ್ನು ಹೇಳಿದರೆ ೨ನೆಯ ಪ್ರಶ್ನೆಗೆ ಎಂದರೆ ಆ ಕ್ಷೇತ್ರವು ಯಾವ ಪ್ರಕಾರದ್ದು ಎಂಬ ಪ್ರಶ್ನೆಗೆ ಉತ್ತರಕೊಟ್ಟಂತಾಗುತ್ತದೆ. ಪ್ರಕೃತಿ ಮತ್ತು ಪುರುಷ ಇವೆರಡೂ ಅನಾದಿಗಳು.

ವಿಕಾರಗಳೂ ಗುಣಗಳೂ ಆ ಪ್ರಕೃತಿಯಿಂದ ಹುಟ್ಟಿದವುಗಳು. ಪುರುಷನಿಗೆ ಶರೀರ ಮತ್ತು ಇಂದ್ರಿಯಗಳುಂಟಾಗುವುದಕ್ಕೆ ಈ ಪ್ರಕೃತಿಯು ಕಾರಣವು. ಶರೀರದಲ್ಲಿದ್ದುಕೊಂಡು ಸುಖದುಃಖಾದಿಗಳನ್ನು ಅನುಭೋಗಿಸುವವನು ಜೀವನು. ಜೀವನು ನಾನಾಬಗೆಯ ಯೋನಿಗಳಲ್ಲಿ ಹುಟ್ಟುವುದಕ್ಕೆ ಜೀವನಿಗೂ ಸತ್ವಾದಿ ಗುಣಗಳಿಗೂ ಉಂಟಾಗುವ ಸಂಬಂಧವೇ ಕಾರಣವು. ಈ ತ್ರಿಗುಣಗಳ ಸಂಬಂಧವು ನಿಮಿತ್ತಕಾರಣವು ಮಾತ್ರ, ನಿಜವಾದ ಕಾರಣನು ಪರಮಾತ್ಮನು. ಏಕೆಂದರೆ ಆತನೇ ಉಪದೇಷ್ಟೃವು, ಅನುಮತಿಕೊಡುವವನು, ಧಾರಕನು, ಭೋಕ್ತೃವು, ಮಹೇಶ್ವರನು. ಈ ದೇಹದಲ್ಲಿರುವ ಉತ್ತಮಪುರುಷನು, ಆತನಿಗೇನೇ ಪರಮಾತ್ಮನೆಂದು ಹೆಸರು.

ಪ್ರಕೃತಿಪುರುಷನ ಸ್ವರೂಪಗಳು ಪುನಃ ಹೇಳಲ್ಪಟ್ಟಿವೆ, ಅವುಗಳಲ್ಲಿ ಪ್ರಕೃತಿಯ ಸ್ವರೂಪವು ೨ನೆಯ ಪ್ರಶ್ನೆಯ ಉತ್ತರದಲ್ಲಿ ಅಡಕವಾಗುತ್ತದೆ. ಮತ್ತು ಆತನ ಪ್ರಭಾವವು ಎಂಥದು ಎಂಬ ೬ನೆಯ ಪ್ರಶ್ನೆಯಲ್ಲಿ ಇಲ್ಲಿ ಪುರುಷನ ಸಂಬಂಧದಿಂದ ಹೇಳುವುದು ಅಡಕವಾಗುತ್ತದೆ. ಸ್ಥಾವರ ಜಂಗಮಾತ್ಮಕ ಜೀವಸಮೂಹವೆಲ್ಲವೂ ಈ ಕ್ಷೇತ್ರ ಕ್ಷೇತ್ರಜ್ಞರ ಸಂಯೋಗದಿಂದ ಹುಟ್ಟಿದುದು. ಪುರುಷನು ಸರ್ವಪ್ರೇರಕನು, ಸರ್ವಾಧಾರನು, ದೇಹಗಳಲ್ಲಿದ್ದರೂ ಆಕಾಶಕ್ಕೆ ಸುಳಿಯಲೇಪವಿಲ್ಲದಂತೆ, ಆತನಿಗೆ ದೋಷಗಳು ತಟ್ಟುವುದಿಲ್ಲ. ಕ್ಷೇತ್ರದಲ್ಲಿರುವ ಪರಮಾತ್ಮನು ಇಡೀ ಕ್ಷೇತ್ರವನ್ನು ಬೆಳಗಿಸುತ್ತಾನೆ.

೧೮ನೆಯ ಪ್ರಕರಣ

( ೧೪ನೆಯ ಅಧ್ಯಾಯದ ತಾತ್ಪರ್ಯ)

## ಸಂಸಾರವು ಸೆರೆಮನೆಯಲ್ಲ, ಸಾಧನಕ್ಷೇತ್ರ

**ಜೋ ಜೋ ಕಂದರ್ಪಕೋಟಿ ಲಾವಣ್ಯ |**
**ಜೋ ಜೋ ವೃಂದಾರಕ ಶಿರೋರನ್ನ ||**
**ಪ್ರಕೃತಿಯ ಮೂಲಕಾರಣವನು ಮಾಡಿ |**
**ಸಕಲ ತತ್ವಗಳ ಸಮೂಹದಿ ಕೂಡಿ |**
**ವಿಕಳಿಸದಂತೆ ತನ್ಮಾತ್ರೆಯ ಹೂಡಿ-**
**ಅಖಿಳೇಶ ಮಹತ್ತತ್ವಗಳ ನಿರ್ಮಿಸಿದೆ ಜೋ ಜೋ**

-ವಾದಿರಾಜಸ್ವಾಮಿಗಳು

ಫಲಕಾಮನಾದಿಗಳನ್ನು ತ್ಯಾಗಮಾಡಿ, ಕರ್ಮಯೋಗ ಧ್ಯಾನಯೋಗ ಎಂಬ ಸಾಧನಗಳನ್ನು ಕೈಕೊಳ್ಳುವುದರಿಂದ ಪರಮಾತ್ಮನ ಅಪರೋಕ್ಷಜ್ಞಾನವುಂಟಾಗುತ್ತದೆಂದು ಹಿಂದಕ್ಕೆ ಹೇಳಿತಷ್ಟೆ. ಈ ಸಾಧನಗಳನ್ನು ಹೇಗೆ ಹೇಗೆ ಆಚರಿಸಬೇಕೆಂಬ ಇತಿಕರ್ತವ್ಯತಾಂಶವು ೧೪ರಿಂದ ೧೮ರ ವರೆಗಿನ ಐದು ಅಧ್ಯಾಯಗಳಲ್ಲಿ ಹೇಳಲ್ಪಟ್ಟಿರುತ್ತದೆ. ಮುಂಚೆ ಈ ೧೪ನೆಯ ಅಧ್ಯಾಯದಲ್ಲಿ ಬಂಧ ಪ್ರಕಾರವೂ ಅದರಿಂದ ಬಿಡುಗಡೆಹೊಂದುವ ಉಪಾಯವೂ ಹೇಳಲ್ಪಟ್ಟಿದೆ. ಜೀವನು ಈ ಸಂಸಾರದಲ್ಲಿ ಹೇಗೆ ಮತ್ತು ಏಕೆ ಬದ್ಧನಾಗಿರುವನೆಂಬುದನ್ನು ತಿಳಿದರೇನೇ ಆತನು ಈ ಬಂಧದಿಂದ ಬಿಡಿಸಿಕೊಳ್ಳುವ ವಿಚಾರವನ್ನು ಮಾಡುವನು. ಅಂದರೆ ಬಂಧನಪ್ರಕಾರವು ಗೊತ್ತಾದರೆ ಮೋಕ್ಷದ ಇಚ್ಛೆಯು ಉತ್ಪನ್ನವಾಗುವುದು. ಆದಕಾರಣ ಈ ಅಧ್ಯಾಯದಲ್ಲಿ ಬಂಧಪ್ರಕಾರವು ಹೇಳಲ್ಪಟ್ಟಿರುವುದು.

ಸಂಸಾರವು ಒಂದು ಬಂಧನವೆಂದು ಅನ್ನುವುದು ವೇದಾಂತಿಗಳಲ್ಲಿ ಬಹಳ ರೂಢವಾಗಿದೆ. ಸಂಸಾರವು ಒಂದು ಸೆರೆಮನೆ, ಅದರಲ್ಲಿ ಆತನು ಇರುವವರೆಗೆ ಆತನಿಗೆ ಮೋಕ್ಷವಿಲ್ಲ ಎಂಬ ಉಪದೇಶವು ವೇದಾಂತ ಶಾಸ್ತ್ರದ ಮುಖ್ಯ ಉಪದೇಶವು. ಆ ಮೋಕ್ಷದಲ್ಲಿ, ಮನುಷ್ಯನ ಸ್ಥಿತಿ ಹೇಗಿರುತ್ತದೆಂಬ ಬಗ್ಗೆ ವೇದಾಂತಿಗಳಲ್ಲಿ ಮತಭೇದವಿದ್ದರೂ, ಮನುಷ್ಯನಿಗೆ ಭೌತಿಕಬಂಧನದಿಂದ ಬಿಡುಗಡೆಹೊಂದುವುದೇ ಧ್ಯೆಯವಾಗಿರಬೇಕೆಂಬ ಬಗ್ಗೆ ಯಾರಲ್ಲಿಯೂ

ಮತಭೇದವಿಲ್ಲ. ಜೀವನಿಗೆ ಶಾಶ್ವತವಾದ ಮತ್ತು ಅಕ್ಷಯವಾದ ಆನಂದವು ಸಿಕ್ಕುವುದು ಈ ಮೋಕ್ಷದಲ್ಲಿಯೇ.

ಪರಮಾತ್ಮನು ಅಸಂಖ್ಯ ಜೀವರುಗಳಿಗೆ ದೇಹಗಳನ್ನು ಕೊಡುವುದಕ್ಕೆ ಕಾರಣವೇನು? ಅವರನ್ನು ಆ ಬಂಧನಗಳಲ್ಲಿ ಇಡಲಿಕ್ಕೆ ಅಲ್ಲ. ಸೃಷ್ಟಿಯ ಪೂರ್ವದಲ್ಲಿ ಈ ಜೀವರುಗಳು ಸ್ತಬ್ಧವಾಗಿ ಬಿದ್ದಿದ್ದರು. ಅಂದರೆ, ಅವರಲ್ಲಿದ್ದ ಶಕ್ತಿಯು ಸುಷುಪ್ತಾವಸ್ಥೆಯಲ್ಲಿ ಇತ್ತು. ಅವರಿಗೆ ಈ ಭೌತಿಕದೇಹಗಳನ್ನು ಕೊಟ್ಟು ಆ ಶಕ್ತಿಯನ್ನು ಅಭಿವ್ಯಕ್ತಮಾಡುವುದಕ್ಕೂ ವಿಕಾಸಗೊಳಿಸುವುದಕ್ಕೂ ಅನುವುಮಾಡಿಕೊಟ್ಟನು. ಆದುದರಿಂದಲೇ ಜೀವರುಗಳಿಗೆ ಸ್ವರೂಪಾನಂದವನ್ನು ಅನುಭವಿಸುವುದಕ್ಕೆ ಅವಕಾಶವಾಗಿದೆ. ಅಂದಬಳಿಕ, ಶರೀರಗಳು ಬಂಧನಗಳೇ? ಅಲ್ಲ.

ಈ ವೇದಾಂತದ ಮೋಕ್ಷದ ಕಲ್ಪನೆಯ ಮೂಲಕವೇ ಸಂಸಾರವು ಹೇಯವಾದುದು, ನೀಚವಾದುದು, ಗೌಣವಾದುದು, ದುಃಖಮಯವಾದುದು ಮುಂತಾದ ಕಲ್ಪನೆಗಳು ನಮ್ಮ ಜನರಲ್ಲಿ ರೂಢವಾಗಿವೆ. ಆದರೆ, ಇದರಲ್ಲಿ ನಮಗೆ ಅತಿರೇಕಬುದ್ಧಿಯು ಕಾಣುತ್ತದೆ. ಸಂಸಾರವನ್ನು ನಮ್ಮ ವೇದಾಂತಿಗಳೂ ದಾಸರೂ ಶರಣರೂ ಎಷ್ಟು ಪರಿಯಿಂದ ಹೀಯಾಳಿಸಿರುವರೋ ಅಷ್ಟು ಅದು ನಿಂದ್ಯವಾಗಿಲ್ಲವೆಂಬುದಷ್ಟೇ ಅಲ್ಲ, ಮೋಕ್ಷಕ್ಕೆ ಅದು ಅಗತ್ಯವಾದ ಒಂದು ಮೆಟ್ಟಿಲು ಎಂಬುದನ್ನು ನಾವು ಅರಿಯಬೇಕು. ಸಂಸಾರವು ಸೆರೆಮನೆಯಲ್ಲ, ಗರಡೀಮನೆಯು ಎಂಬುದೇ ನಿಜವಾದ ಸಿದ್ಧಾಂತ. ಆದಕಾರಣ, ನಾವು ಬಂಧವೆಂಬ ಶಬ್ದವನ್ನು ಉಪಯೋಗಿಸುವುದನ್ನು ಬಿಟ್ಟು ಸಂಸಾರವು ಸಾಧನವು ಎಂಬ ಶಬ್ದವನ್ನು ಉಪಯೋಗಿಸುವುದು ಹೆಚ್ಚಿಗೆ ಒಳಿತು ಎಂದು ನಮ್ಮ ಸ್ವಂತದ ಅಭಿಪ್ರಾಯವಿರುತ್ತದೆ. ಆ ಶಬ್ದವನ್ನು ಉಪಯೋಗಿಸುವುದರಿಂದ ಬಂಧವೆಂದ ಕೂಡಲೆ ನಮ್ಮಲ್ಲಿ ಉಂಟಾಗಬಹುದಾದ ತಪ್ಪು ಕಲ್ಪನೆಗಳು ಬಾರದಿರಲಿಕ್ಕೆ ಅವಕಾಶವಾಗುತ್ತದೆ. ಕೆಲವು ದಾಸರು ಈ ಕಾರಣದ ಮೂಲಕವೇ ಇದಕ್ಕೆ ಸಾಧನ ಶರೀರವೆಂದು ಕರೆದಿರಬೇಕು, ಇರಲಿ.

ದೇವರು ನಮಗೆ ಈ ಸಾಧನಶರೀರವನ್ನು ಏಕೆ ಕೊಟ್ಟಿರುವುನೆಂಬುದನ್ನು ತಿಳಿದುಕೊಳ್ಳಬೇಕು ಅದಕ್ಕೆ ಮೊದಲು. ಜೀವರುಗಳಿಗೆ ಈ ಶರೀರಗಳ ಪ್ರಾಪ್ತಿಯು ಹೇಗೆ ಆಗುತ್ತದೆಂಬುದನ್ನು ಅರಿಯಬೇಕು. ಪರಮಾತ್ಮನು ಗಂಡನು ಪ್ರಕೃತಿ ಅಥವಾ ಮಹಾಲಕ್ಷ್ಮಿಯು ಆತನ ಹೆಂಡತಿಯು. ಪರಮಾತ್ಮನು ೨೪ ತತ್ವಾಂಶದಿಂದ ಯುಕ್ತರಾದ ಜೀವರುಗಳನ್ನು ತನ್ನ ಹೊಟ್ಟೆಯೊಳಗಿಂದ ವೀರ್ಯರೂಪವಾಗಿ ತೆಗೆದು ಅವರನ್ನು ಪ್ರಕೃತಿಯ ಗರ್ಭದಲ್ಲಿ ಇಡುತ್ತಾನೆ. ಆಗ ಅವಳಿಗೆ ಗರ್ಭಧಾರಣೆಯಾಗಿ, ಅನೇಕ ತರಹದ ಜೀವರುಗಳು ಹುಟ್ಟುತ್ತಾರೆ. ಜಗತ್ತಿನಲ್ಲಿ, ಪಶುಪಕ್ಷಿ, ಮನುಷ್ಯ ದೇವತೆಗಳು ಇವರೇ ಮುಂತಾದವರು ಹುಟ್ಟುವುದಕ್ಕೆ ಈ ಪರಮಾತ್ಮ ಮತ್ತು ಪ್ರಕೃತಿ ಇವರಿಬ್ಬರ ಸಂಯೋಗವೇ ಕಾರಣವು.

**ತನ್ನ ಮೈಯಿಂದ ಮಕ್ಕಳ ಸೃಜಿಸಿ ಯುಗಯುಗದಿ |**
**ನಿನ್ನ ತಾರುಣ್ಯ ಲಾವಣ್ಯಗಳನ್ನು**
**ಮನ್ನಿಸಿ ಪೊರೆವ ಹರಿಯ ಪಟ್ಟದರಾಣಿ**
**ಜಗನ್ಮಾನ್ಯ ಚೈತನ್ಯ**

-ವಾದಿರಾಜ ಸ್ವಾಮಿಗಳು

ಸ್ತ್ರೀ ಪುರುಷರ ಸಂಯೋಗದಿಂದ ಜನ್ಮವಾಗುತ್ತದೆಂದು ಸಾಧಾರಣವಾದ ತಿಳವಳಿಕೆ. ಆದರೆ ಅದು ಅಂಶತಃ ಮಾತ್ರವೇ ನಿಜವು ಏಕೆಂದರೆ, ಪ್ರತಿಸಾರೆ ಜೀವವು ಹುಟ್ಟುವಾಗ ಪರಮಾತ್ಮ ಮತ್ತು ಪ್ರಕೃತಿ ಇವರಿಬ್ಬರ ಸಂಯೋಗವು ಆಗಲೇಬೇಕು. ಹಾಗಿಲ್ಲದೆ, ಬರೀ ಸ್ತ್ರೀಪುರುಷರ ಸಂಯೋಗಮಾತ್ರದಿಂದಲೇ ಜೀವವು ಹುಟ್ಟಲಾರದು, ಪರಮಾತ್ಮನ ಸಹಾಯವೂ ಬೇಕು.

ಪ್ರಕೃತಿಯಿಂದ ಸತ್ವರಜ ತಮಗಳೆಂಬ ಮೂರು ಗುಣಗಳು ಹುಟ್ಟುತ್ತವೆ. ಇವು ದೇಹದಲ್ಲಿರುವ ದೇಹಿಯನ್ನು ಅಂದರೆ ಜೀವನನ್ನು ಮೂರುವಿಧವಾಗಿ ಬಂಧಿಸುತ್ತವೆ. ಸತ್ವ ಗುಣವು ನಿರ್ಮಲವಿರುವ ಮೂಲಕ, ಅದು ರೋಗರಹಿತವಾದುದೂ ಪ್ರಕಾಶವನ್ನು ಕೊಡುವುದೂ ಆಗಿದೆ. ಅದು ಸುಖದಲ್ಲಿಯೂ ಜ್ಞಾನದಲ್ಲಿಯೂ ಸ್ನೇಹವನ್ನು ಹುಟ್ಟಿಸಿ, ಜೀವನನ್ನು ಬಂಧಿಸುತ್ತದೆ. ಅಂದರೆ, ವಿಷಯಸುಖ ಮತ್ತು ಲೌಕಿಕಜ್ಞಾನ ಇವುಗಳ ಬಗ್ಗೆ ಆಸಕ್ತಿಯನ್ನು ಹುಟ್ಟಿಸುವುದು ಕೂಡ, ಜೀವನಿಗೆ ಒಂದು ವಿಧದ ಬಂಧಕವೇ. ಏಕೆಂದರೆ, ಸುಖ ಮತ್ತು ಜ್ಞಾನ ಇವುಗಳ ವಿಷಯದಲ್ಲಿ ಆಸಕ್ತಿಯಿರುವುದೂ ಒಳ್ಳೆಯದಲ್ಲ. ಅನಾಸಕ್ತಿಯೇ ಹೆಚ್ಚಿನದು. ರಜೋಗುಣವು ರಾಗಾತ್ಮಕವಾದುದು ಅಂದರೆ ತೃಷ್ಣ ಮತ್ತು ಆಸಕ್ತಿ ಇವುಗಳಿಗೆ ಕಾರಣವು. ಅದರ ಮೂಲಕ ಕರ್ಮದಲ್ಲಿ ಆಸಕ್ತಿಯು ಹೆಚ್ಚಿಗೆ ಆಗುತ್ತದೆ. ಆ ರೀತಿಯಿಂದ ಅದು ಜೀವನನ್ನು ಬಂಧಿಸುತ್ತದೆ. ತಮೋಗುಣವು ಅಜ್ಞಾನಕ್ಕೆ ಕಾರಣವು. ಅದು ಮೋಹವನ್ನು ಉಂಟುಮಾಡುತ್ತದೆ. ಪ್ರಮಾದ ಆಲಸ್ಯನಿದ್ರೆಗಳನ್ನು ಹುಟ್ಟಿಸಿ ಅದು ಜೀವನನ್ನು ಬಂಧಿಸುತ್ತದೆ. ಒಟ್ಟಿಗೆ, ಸತ್ವವು ಸುಖಪ್ರವರ್ತಕವು, ರಜವು ಕರ್ಮಪ್ರವರ್ತಕವು. ತಮವು ಪ್ರಮಾದ ಪ್ರವರ್ತಕವು. ಪ್ರತಿಯೊಬ್ಬರಲ್ಲಿ ಮೂರೂ ಗುಣಗಳು ಇದ್ದಾಗ್ಯೂ ಕೆಲಕೆಲವರಲ್ಲಿ ಕೆಲಕೆಲವುಗಳ ಪ್ರಾಬಲ್ಯವಿರುತ್ತದೆ. ಕೆಲವರಲ್ಲಿ ಸತ್ವವು ಪ್ರಧಾನವಿರುತ್ತದೆ. ಮಿಕ್ಕೆರಡು ಗುಣಗಳು ಕಡಿಮೆ ಇರುತ್ತವೆ. ಹೀಗೆ ಮಿಕ್ಕವುಗಳ ವಿಷಯ. ಸರ್ವೇಂದ್ರಿಯಗಳೂ ಯಾವಾಗ ತಾವು ಸ್ವಾಭಾವಿಕವಾಗಿಯೇ ಕೊಡತಕ್ಕ ಪ್ರಕಾಶವನ್ನು ಕೊಡುತ್ತವೆಯೋ ಅಂದರೆ ಆಯಾ ಇಂದ್ರಿಯಗಳಿಂದುಂಟಾಗತಕ್ಕ ವಿಷಯಜ್ಞಾನವು ಚೆನ್ನಾಗಿ ಆಗುತ್ತದೆಯೋ ಆಗ ಸತ್ವ ಗುಣದ ಅಭಿವೃದ್ಧಿಯಾಗಿದೆಯೆಂದೂ ಲೋಭ, ಪ್ರವೃತ್ತಿ, ಕರ್ಮಗಳ ಆರಂಭ, ಅಶಾಂತಿ, ಸ್ಪೃಹೆ ಈ ಗುಣಗಳು ಹೆಚ್ಚಾದಾಗ ರಜೋಗುಣದ ಪ್ರಾಬಲ್ಯವಾಗಿದೆಯೆಂದೂ,

ಅಪ್ರಕಾಶ, ಅಪ್ರವೃತ್ತಿ, ಪ್ರಮಾದ, ಮೋಹ ಇವು ಕಂಡು ಬಂದಾಗ ತಮೋಗುಣದ ಪ್ರಾಬಲ್ಯವಾಗಿದೆಯೆಂದೂ ತಿಳಿಯ ತಕ್ಕದ್ದು. ಸತ್ವಗುಣದ ಪ್ರಾಬಲ್ಯವಾದಾಗ ಸತ್ತರೆ ಮುಂದೆ ಜ್ಞಾನಿಯಾಗಿ ಹುಟ್ಟುತ್ತಾನೆ, ರಜೋಗುಣದ ಪ್ರಾಬಲ್ಯವಾದಾಗ ಸತ್ತರೆ, ಕರ್ಮಿಯಾಗಿ ಹುಟ್ಟುತ್ತಾನೆ, ತಮದಲ್ಲಿ ಸತ್ತರೆ ಮೂಢ ಯೋನಿಗಳಲ್ಲಿ ಜನ್ಮತಾಳುತ್ತಾನೆ. ಸಾತ್ವಿಕ ಕರ್ಮಕ್ಕೆ ಸಾತ್ವಿಕ ಫಲ ಅಂದರೆ ಸುಖ, ರಜೋಯುಕ್ತ ಕರ್ಮಕ್ಕೆ ದುಃಖಮಿಶ್ರ ಸುಖ, ತಮೋಯುಕ್ತ ಕರ್ಮಕ್ಕೆ ಕೇವಲ ದುಃಖ ಇವು ಸಾಕ್ಷಾತ್ ಫಲಗಳು. ಸತ್ವದಿಂದ ಜ್ಞಾನ, ರಜದಿಂದ ಲೋಭ, ತಮದಿಂದ ಪ್ರಮಾದ, ಮೋಹ ಮತ್ತು ಅಜ್ಞಾನ ಇವು ಹುಟ್ಟುತ್ತವೆ. ಅಂದರೆ ಇವು ಪರಂಪರಾ ಫಲಗಳು. ಸಾತ್ವಿಕರು ಊರ್ಧ್ವಲೋಕಗಳನ್ನು ರಾಜಸರು ಮದ್ಯಮ ಲೋಕಗಳನ್ನು ತಾಮಸರು ಅಧೋಲೋಕಗಳನ್ನು ಹೊಂದುತ್ತಾರೆ.

ಹೀಗೆ, ಸತ್ವಾದಿ ಗುಣಗಳೇ ಪರಿಣಾಮ ಕಾರಣಗಳೆಂದು ಯಾವನು ತಿಳಿಯುತ್ತಾನೋ ಮತ್ತು ಯಾವನು ಪರಮಾತ್ಮನನ್ನು ಅರಿಯುತ್ತಾನೋ ಆತನಿಗೆ ಮುಕ್ತಿ. ಈ ತ್ರಿಗುಣಗಳನ್ನು ಮೀರುವುದೇ ಆ ಮುಕ್ತಿಗೆ ಉಪಾಯ. ಏಕೆಂದರೆ ತ್ರಿಗುಣಗಳೇ ಜನ್ಮಮೃತ್ಯುಜರಾ ಮತ್ತು ದುಃಖ ಇವುಗಳಿಗೆ ಕಾರಣಗಳು.

ಗುಣಾತೀತನ **ಲಕ್ಷಣಗಳು** ಯಾವುವೆಂದರೆ- ಅಂಥವನು ಜ್ಞಾನ (ಲೌಕಿಕಜ್ಞಾನ, ಪ್ರವೃತ್ತಿ ಮತ್ತು ಮೋಹ ಇವು ಉಂಟಾದರೆ ಬೇಡೆನ್ನುವುದಿಲ್ಲ, ಉಂಟಾಗದಿದ್ದರೆ ಬೇಕೆನ್ನುವುದಿಲ್ಲ. ಅವು ಬಂದರೂ ಅಷ್ಟೇ ಹೋದರೂ ಅಷ್ಟೇ, ಎಂದರೆ ಆತನು ಉದಾಸೀನಂತಿರುತ್ತಾನೆ. ಅವುಗಳಿಂದ ಚಲನಾಗದೆ ತನ್ನ ಆಚಾರವನ್ನು ನಡಿಸಿರುತ್ತಾನೆ. ಆತನು ಸಮದುಃಖಸುಖನಾಗಿರುತ್ತಾನೆ, ಸಮಲೋಷ್ಠಕಾಂಚನನಾಗಿರುತ್ತಾನೆ, ಪ್ರಿಯ-ಅಪ್ರಿಯ, ನಿಂದಾ-ಸ್ತುತಿ ಮಾನ-ಅಪಮಾನ ಇವುಗಳನ್ನು ಸಮನಾಗಿ ಗಣಿಸುತ್ತಾನೆ. ಮಿತ್ರ-ಅರಿಗಳನ್ನು ಸಮಾನವಾಗಿ ಭಾವಿಸುತ್ತಾನೆ. ಸರ್ವಾರಂಭಗಳನ್ನು ತ್ಯಾಗಮಾಡುತ್ತಾನೆ. ಇದು ಆತನ **ಆಚಾರ**ವಾಯಿತು. ಅವ್ಯಭಿಚಾರವಾದ ಪರಮಾತ್ಮಭಕ್ತಿಯೇ ಹೀಗೆ ಗುಣಾತೀತನಾಗುವುದಕ್ಕೆ ಉಪಾಯ. ಇಂಥ ಗುಣಾತೀತನು ಭಗವಂತನಿಗೆ ಪ್ರಿಯನಾಗುತ್ತಾನೆ. ಮತ್ತು ಆತನಿಗೆ ಮಹಾಲಕ್ಷ್ಮಿಯ ಪ್ರಾಪ್ತಿಯಾಗುತ್ತದೆ. ಪರಮಾತ್ಮನೇ ಮಹಾಲಕ್ಷ್ಮಿಗೂ, ಮೋಕ್ಷಕ್ಕೂ ಶಾಶ್ವತವಾದ ಧರ್ಮಕ್ಕೂ ಆಧಾರನು.

೧೯ನೆಯ ಪ್ರಕರಣ

( ೧೫ನೆಯ ಅಧ್ಯಾಯದ ತಾತ್ಪರ್ಯ )

# ಸಂಸಾರ ವೃಕ್ಷ

**ಜಗದಾಖ್ಯ ವೃಕ್ಷ ಚಿಂತಿಪುದು ಬುಧರು ||ಪ||**
**ಭಗವಂತನೆಂಬ ಆಗಸದಲ್ಲಿ ಪಸರಿಸಿದ ||ಅ||**
**ಚತುರಾಸ್ಯವಾಣಿ ಈರ್ವರು ಬೀಜ ಚಿತ್ಪ್ರಕೃತಿ**
**ಪೃಥಿವಿ ಕರ್ಮವು ಬೇರು, ತ್ರಿಗುಣ ತ್ವಚವು**
**ಕ್ಷಿತಿಜಲಾನಳವಾಯು ಗಗನ ಶಾಖೆಗಳಿದಕೆ**
**ಮತಿಸಹಿತ ದಶಕರಣ ಉಪಶಾಖೆಯೆನಿಸುವುದು ||೧||**
**ಅಹಂಕಾರ ಬಲದಿಂದ ಅಭಿವೃದ್ಧಿಯೈದುವುದು**
**ಅಹಿಕಸುಖ ಕುಸುಮ ತನ್ಮಾತ್ರರಸದಿ**
**ಸಹಿತವಾದ ಪ್ರವೃತ್ತಿ ಕರ್ಮಗಳ ಫಲವನ್ನು**
**ಅಹರಹರ್ ಭುಂಜಿಪುದು ತನ್ನಾಮ ಜೀವಖಗ ||೨||**
**ನಾನು ನನ್ನದು ಎಂಬ ನೀಡದ್ವಯಗಳಿದಕೆ**
**ಮಾನಾಪಮಾನಾದಿಗಳೆ ಪತ್ರವು**
**ಹೀನವಿದ್ಯಾದಿ ಪಂಚಕವೆ ಸರ್ವಗಳಲ್ಲಿ**
**ಶ್ರೀನಿಧಿ ಜಗನ್ನಾಥ ವಿಠಲ ಸಂರಕ್ಷಕನು ||೩||**

-ಜಗನ್ನಾಥ ದಾಸರು

೧೪ನೆಯ ಅಧ್ಯಾಯದಲ್ಲಿ ಸಂಸಾರವು ಸೆರೆಮನೆಯಲ್ಲ, ಸಾಧನೆ ಕ್ಷೇತ್ರವೆಂದು ಹೇಳಿತು. ಪರಮಾತ್ಮನು ಜೀವನಿಗೆ ಪ್ರಕೃತಿಯೊಡನೆ ಲಗ್ನ ಮಾಡಿಕೊಟ್ಟಿದ್ದಾನೆ. ಹೀಗೆ ಜೀವನಿಗೆ ಪ್ರಕೃತಿಯೊಡನೆ ಗಂಟು ಹಾಕಿಕೊಡುವುದರಲ್ಲಿ ಒಂದು ಉದ್ದೇಶವಿದೆ. ಅದೇನೆಂದರೆ, ಜೀವನು ಆವಳೊಡನೆ ಚೆನ್ನಾಗಿ ಸಂಸಾರಮಾಡಬೇಕೆಂಬುದು. ಹೀಗೆ ಆತನು ಚೆನ್ನಾಗಿ ಸಂಸಾರಮಾಡದಿದ್ದರೆ ಆತನಿಗೆ ಮೋಕ್ಷವಿಲ್ಲ. ಅಥವಾ ಮತ್ತೊಂದು ರೀತಿಯಲ್ಲಿ ಹೇಳುವುದಾದಲ್ಲಿ ಸಂಸಾರವು ಒಂದು ಪರೀಕ್ಷೆಯು. ಈ ಪರೀಕ್ಷೆಯಲ್ಲಿ ಜೀವನು ಪಾಸಾದರೇನೇ ಆತನಿಗೆ ಮುಕ್ತಿ. ಈ

ಸಂಸಾರದಲ್ಲಿಯೇ ಜೀವನು ಕೊಳೆಬೀಳಬೇಕೆಂಬುದು ಪರಮಾತ್ಮನ ಉದ್ದೇಶವಲ್ಲ. ಆದರೂ ಸಂಸಾರದಿಂದ ಬಿಡುಗಡೆ ಹೊಂದಲಿಕ್ಕೆ ಸಂಸಾರಮಾಡುವುದೇ ಸಾಧನ. ಬೇರೆ ಸಾಧನವಿಲ್ಲ. ಆದಕಾರಣ ಮನುಷ್ಯನು ಈ ಸಂಸಾರದ ನಿಜವಾದ ಸ್ವರೂಪವನ್ನು ಮುಂಚೆ ಚೆನ್ನಾಗಿ ಅರಿತುಕೊಳ್ಳಬೇಕು. ಆ ಸಂಸಾರದ ಸ್ವರೂಪವು ಈ ೧೫ನೆಯ ಅಧ್ಯಾಯದಲ್ಲಿ ಕೊಡಲ್ಪಟ್ಟಿದೆ. ಇಲ್ಲಿ ಆ ಸಂಸಾರವನ್ನು ಒಂದು ವೃಕ್ಷಕ್ಕೆ ಹೋಲಿಸಿ, ಅದರ ಸಂಪೂರ್ಣ ಸ್ವರೂಪವು ವ್ಯಕ್ತಮಾಡಲ್ಪಟ್ಟಿದೆ. ೧೩ನೆಯ ಅಧ್ಯಾಯದಲ್ಲಿ ಕ್ಷೇತ್ರವೆಂಬ ಶಬ್ದದ ವ್ಯಾಖ್ಯೆಯ ಸಹಿತವಾಗಿ ಈ ಸಂಸಾರದ ವರ್ಣನೆಬಂದಿದೆ. ಪ್ರಕೃತಿ, ಮಹತ್ತು, ಅಹಂಕಾರ ಮುಂತಾದ ೨೫ ತತ್ವಗಳಿಂದ ಕೂಡಿದ್ದೇ ಕ್ಷೇತ್ರವು ಎಂದು ಅಲ್ಲಿ ಹೇಳಿದೆ. ಅದನ್ನೇ ಇಲ್ಲಿ ಒಂದು ಅಶ್ವತ್ಥವೃಕ್ಷಕ್ಕೆ ಹೋಲಿಸಿ, ವಿಸ್ತಾರವಾಗಿ ವರ್ಣಿಸಿರುತ್ತದೆ. ಈ ಸಂಸಾರವೃಕ್ಷಕ್ಕೆ ಅಥವಾ ಜಗದ್ವೃಕ್ಷಕ್ಕೆ ಅಶ್ವತ್ಥವೃಕ್ಷವೆಂದು ಹೆಸರು. ಅದಕ್ಕೆ ಅಶ್ವತ್ಥವೃಕ್ಷವೆಂದು ಕರೆಯುವುದಕ್ಕೆ ಕಾರಣವು ಮತ್ತೇನೂ ಇಲ್ಲ, ಅದು ಅಶ್ವದಂತೆ ಅಂದರೆ ಕುದುರೆಯಂತೆ ಚಂಚಲವಿರುತ್ತದೆ, ಅಥವಾ ಇಂದು ಇದ್ದಂತೆ ನಾಳೆ ಇರುವುದಿಲ್ಲ. ಅಶ್ವತ್ಥವೆಂಬ ಸಂಸ್ಕೃತ ಶಬ್ದಕ್ಕೆ ಆ ಬಗೆಯಾಗಿ ಉತ್ಪತ್ತಿಗಳಿರುವ ಕಾರಣವೇ ಅದಕ್ಕೆ ಅಶ್ವತ್ಥವೆಂದು ಹೆಸರು. ಇರಲಿ.

ಈ ಅಶ್ವತ್ಥ ವೃಕ್ಷದ ವರ್ಣನೆ

೧. ವಿಷ್ಣು

೨. ಚಿತ್ ಪ್ರಕೃತಿ

೩. ಅಚಿತ್ ಪ್ರಕೃತಿ

ಇವು ಮೂರು ಈ ಗಿಡದ ಮೂಲಗಳು. ವೃಕ್ಷಕ್ಕೆ ಭೂಮಿಯ ಅಭಿಮಾನಿದೇವತೆಯಾದ ಧರಾದೇವಿಯು ಹೇಗೆ ಪೃಥಕ್ ಮೂಲಳೋ ಹಾಗೆ ಈ ಜಗತ್ತಿಗೆ ವಿಷ್ಣುವು ಪೃಥಙ್ಮೂಲನು. ಚಿತ್ ಪ್ರಕೃತಿ ಅಥವಾ ಮಹಾಲಕ್ಷ್ಮಿಯು ವೃಕ್ಷಕ್ಕೆ ಭೂಮಿಯು ಹೇಗೆ ಮೂಲಳೋ ಹಾಗೆ ಮೂಲಳು. ಎಂದರೆ, ಗಿಡದ ಹುಟ್ಟುವಿಕೆಗೆ ಹೇಗೆ ಅದರ ಕೆಳಗಿರುವ ಭೂಮಿಯು ಕಾರಣವೋ ಹಾಗೆ ಜಗತ್ತಿನ ಉತ್ಪತ್ತಿಗೆ ಚಿತ್ ಪ್ರಕೃತಿಯೂ ಕಾರಣಳು. ಗಿಡಕ್ಕೆ ಹೇಗೆ ಬೊಡ್ಡೆಯೋ ಹಾಗೆ ಜಗತ್ತಿಗೆ ಜಡ ಪ್ರಕೃತಿಯು ಬೊಡ್ಡೆಯು.

| | |
|---|---|
| ೧. ಆಕಾಶತತ್ವ | ಇವೆಂಟು ತತ್ವಗಳೂ ಈ ಜಗದ್ವೃಕ್ಷದ ಮುಖ್ಯ ಟೊಂಗೆಗಳು. ಈ ಟೊಂಗೆಗಳ ಬೇರುಗಳು ಮೇಲ್ಗಡೆಗೆ ಅಂದರೆ ಪ್ರಕೃತಿ ತತ್ವದಲ್ಲಿಯೂ ಹಬ್ಬಿವೆ. ಕೆಳಗಡೆಗೆ ಅಂದರೆ ಈ ಟೊಂಗೆಗಳಿಂದ ಹುಟ್ಟಿದ ಶರೀರ ಇಂದ್ರಿಯ |
| ೨. ವಾಯುತತ್ವ | |
| ೩. ತೇಜತತ್ವ | |
| ೪. ಅಪ್ ತತ್ವ | |

| | |
|---|---|
| ೫. ಪೃಥ್ವಿ ತತ್ವ | ಮುಂತಾದವುಗಳಲ್ಲಿಯೂ ಹಬ್ಬಿಕೊಂಡಿವೆ. ಅಂದರೆ, ಈ ಜಗತ್ತಿನಲ್ಲಿ ಹುಟ್ಟಿರುವ ನಾನಾ ತರಹದ ಪ್ರಾಣಿಗಳ ಶರೀರಗಳು ಈ ತತ್ವಗಳ ಪರಿಣಾಮಗಳು. |
| ೬. ಮನಸ್ತತ್ವ | |
| ೭. ಬುದ್ಧಿ ತತ್ವ | |
| ೮. ಅಹಂಕಾರತತ್ವ | |

| | |
|---|---|
| ೧. ಸತ್ವ | ಇವು ಮೂರು ಗುಣಗಳು ಆ ಟೊಂಗೆಗಳಲ್ಲಿ ರಸದಂತೆ ವ್ಯಾಪಿಸಿರುತ್ತವೆ, ಅವುಗಳಿಂದಲೇ ಗಿಡದ ಶಾಖೋಪಶಾಖೆಗಳೆಲ್ಲವೂ ಅಭಿವೃದ್ಧಿ ಹೊಂದುತ್ತವೆ. ಈ ಸತ್ವರಜಸ್ತಮಗಳು ಕೂಡ ಸೂಕ್ಷ್ಮರೂಪದಿಂದ ಪಕೃತಿಯಲ್ಲಿ ಹಬ್ಬಿರುತ್ತವೆ, ಇತ್ತ ಮಹತ್ತು ಅಹಂಕಾರ ಮುಂತಾದವುಗಳಲ್ಲಿಯೂ ಹಬ್ಬಿರುತ್ತವೆ. |
| ೨. ರಜ | |
| ೩. ತಮ | |

| | |
|---|---|
| ೧. ಸ್ಪರ್ಶ | ಇವೈದು ವಿಷಯಗಳು ಆ ಗಿಡಕ್ಕೆ ಪ್ರವಾಲಗಳಂತೆ ಅಂದರೆ ಚಿಗುರುಗಳಂತೆ ಇರುತ್ತವೆ. ಚಿಗುರುಗಳು ನೋಡಲಿಕ್ಕೇನೋ ಬಹಳ ಚಂದವಾಗಿ ಕಾಣುತ್ತವೆ. ಆದರೆ ಅವು ಕ್ಷಣಿಕ ಬಾಳುವಂಥವುಗಳು. ಹಾಗೆಯೇ ವಿಷಯಸೌಖ್ಯಗಳು ಕ್ಷಣ ಭಂಗುರವಾದವುಗಳು. |
| ೨. ಶಬ್ದ | |
| ೩. ರೂಪ | |
| ೪. ರಸ | |
| ೫. ಗಂಧ | |

೧. ವೇದಗಳು :- ವೇದಗಳು ಜಗದ್ವೃಕ್ಷಕ್ಕೆ ಎಲೆಗಳು. ಎಲೆಗಳು ಹುಟ್ಟಿದಬಳಿಕವೇ ಹಣ್ಣುಗಳ ಉತ್ಪತ್ತಿ. ಹಾಗೆಯೇ ವೇದಗಳನ್ನು ತಿಳಿದುಕೊಂಡ ನಂತರವೇ ಕಾಮ ಮತ್ತು ಮೋಕ್ಷವೆಂಬ ಫಲಗಳು.

೧. ಕ್ಷಾಮ ೨. ಮೋಕ್ಷ

ಇವೆರಡೂ ಜಗದ್ವೃಕ್ಷಕ್ಕೆ ಫಲಗಳು. ಅಂದರೆ ಐಹಿಕ ಮತ್ತು ಆಮುಷ್ಮಿಕ ಫಲಗಳು ಇವು.

ಇದು ಜಗತ್ತಿನ ಮುಖ್ಯ ಸ್ವರೂಪವು. ಆದರೆ ಇದರ ಸ್ವರೂಪವನ್ನು ಸಾಮಾನ್ಯರು ಅರಿಯುವುದಿಲ್ಲ. ಈ ಜಗತ್ತಿನ ಹುಟ್ಟಿಗೂ ಇರುವಿಕೆಗೂ ಕೊನೆಗೂ ಕಾರಣನಾಗಿರುವ ವಿಷ್ಣುವಿನ ನಿಜಸ್ವರೂಪವನ್ನೂ ಅಜ್ಞಾನಿಗಳು ತಿಳಿಯುವುದಿಲ್ಲ. ಈ ವಿಷಯಗಳನ್ನು ತಿಳಿಯುವುದಕ್ಕೆ ಒಂದೇ ಉಪಾಯ. ಅದೇನೆಂದರೆ ವೈರಾಗ್ಯವನ್ನು ತಾಳಿ ಪರಮಾತ್ಮನ ಜ್ಞಾನವನ್ನು ಗಳಿಸುವುದು. ಅದಕ್ಕೋಸ್ಕರವೇ ಆ ಆದ್ಯ ಪುರುಷನಿಗೆ ಅನನ್ಯಭಾವದಿಂದ ಶರಣುಹೋಗಬೇಕು. ಏಕೆಂದರೆ ಆ

ಆದ್ಯ ಪುರುಷನಿಂದಲೇ ಈ ಪುರಾತನವಾದ ಸಂಸಾರವೃಕ್ಷವು ಹಬ್ಬಿರುತ್ತದೆ. ಒಟ್ಟಿಗೆ, ಈ ಸಂಸಾರವೆಂಬ ವೃಕ್ಷವನ್ನು ಛೇದಿಸುವುದಕ್ಕೆ ಇದೇ ಮುಖ್ಯಸಾಧನ.

ಮನುಷ್ಯನು ಮತ್ತೂ ಕೆಲವು ಸಾಧನಗಳನ್ನು ಕೈಕೊಳ್ಳಬೇಕು. ಅವು ಯಾವುವೆಂದರೆ, ಮಾನಮೋಹಗಳನ್ನು ಬಿಡುವುದು, ವಿಷಯ ಸಂಗದೋಷವನ್ನು ಗೆಲ್ಲುವುದು, ಅಧ್ಯಾತ್ಮಜ್ಞಾನದಲ್ಲಿ ತೊಡಗಿರುವುದು, ವಿಷಯ ತೃಷೆಯನ್ನು ತೊರೆಯುವುದು, ಸುಖದುಃಖಗಳೇ ಮುಂತಾದ ದ್ವಂದ್ವಗಳಿಂದ ದೂರಿರುವುದು ಇವೇ ಮುಂತಾದವುಗಳು. ಇವೇ ಸಾಧನಗಳು ಹಿಂದಕ್ಕೆ ೧೩ನೆಯ ಅಧ್ಯಾಯದಲ್ಲಿಯೂ ಹೇಳಲ್ಪಟ್ಟಿವೆ.

ಇದಾಯಿತು ಜಗದ್ವೃಕ್ಷದ ವರ್ಣನೆ. ಇನ್ನು ಈ ೧೫ನೆಯ ಅಧ್ಯಾಯದಲ್ಲಿ ಬಂದಿರುವ ಮುಂದಿನ ವಿಷಯವೆಂದರೆ ಆ ಭಗವಂತನ ಸ್ವರೂಪವರ್ಣನೆ. ಆ ಭಗವಂತನ ಸ್ವರೂಪವು ಎಂಥದೆಂದರೆ ಅಲ್ಲಿ ಹೋದವರಿಗೆ ಪುನರ್ಜನ್ಮವಿಲ್ಲ; ಆ ಅವ್ಯಯವಾದ ಸ್ಥಾನವು ಅತ್ಯಂತ ವಿಲಕ್ಷಣವಾದುದು. ಅಲ್ಲಿ, ಸೂರ್ಯಚಂದ್ರರು ಪ್ರಕಾಶಿಸುವುದಿಲ್ಲ; ಅಗ್ನಿಯ ತೇಜವು ಅಲ್ಲಿ ಇಲ್ಲ. ಏಕೆಂದರೆ, ಸೂರ್ಯ, ಚಂದ್ರ, ಅಗ್ನಿ ಇವರಿಗೇನೇ ಪ್ರಕಾಶವನ್ನು ಕೊಡುವವನು ಆ ಭಗವಂತನು. ಅಂದಬಳಿಕ ಇವರು ಆತನಿಗೆ ಪ್ರಕಾಶವನ್ನು ಹೇಗೆ ಕೊಡಬಲ್ಲರು? ಆ ಭಗವಂತನು ಮತ್ತಾರೂ ಅಲ್ಲ, ಶ್ರೀಕೃಷ್ಣನೇ. ಜೀವಲೋಕದಲ್ಲಿ ಅನಾದಿಯಿಂದಲೂ ಇರುವ ಜೀವಗಳು ಆ ಪರಮಾತ್ಮನ ಭಿನ್ನಾಂಶಗಳೇ. ಜೀವನು ಈ ಲೋಕದಲ್ಲಿ ಶರೀರವನ್ನು ಧಾರಣಮಾಡುವಾಗ, ಮೂಲ ಪ್ರಕೃತಿಯೊಳಗಿಂದ ಪಂಚೇಂದ್ರಿಯಗಳನ್ನೂ ಮನಸ್ಸನ್ನೂ ಸೆಳೆದು ಕೊಂಡೇ ಹುಟ್ಟುತ್ತಾನೆ, ಮತ್ತು ಸಾಯುವಾಗ ಆತನು ಈ ಪಂಚೇಂದ್ರಿಯಗಳನ್ನೂ ಮನಸ್ಸನ್ನೂ ಸೆಳೆದುಕೊಂಡೇ ಹೋಗುತ್ತಾನೆ. ಅಂದರೆ, ಮನುಷ್ಯನು ಸತ್ತರೂ ಈ ಪಂಚೇಂದ್ರಿಯಗಳೇ ಮುಂತಾದವುಗಳೂ ಸತ್ತುಹೋಗುವುದಿಲ್ಲ. ಅವು ಜೀವನ ಕೂಡ ಹೊರಟುಹೋಗುತ್ತವೆ. ಮತ್ತು ಜೀವನು ಪುನರ್ಜನ್ಮವನ್ನು ಪಡೆಯುವುದಕ್ಕೆ ಅವೇ ಕಾರಣೀಭೂತವಾಗುತ್ತವೆ. ಆದರೆ ಜೀವನು ಸ್ವಸಾಮರ್ಥ್ಯದಿಂದ ಇಂದ್ರಿಯಗಳನ್ನು ಪ್ರವರ್ತನಮಾಡುವುದಿಲ್ಲ. ಪರಮಾತ್ಮನಿಂದ ಪ್ರೇರಿಸಲ್ಪಟ್ಟವನಾಗಿಯೇ ಜೀವನು ಆ ಕಾರ್ಯವನ್ನು ಮಾಡುತ್ತಾನೆ. ಜೀವನು ಹುಟ್ಟುವಾಗ ಹೀಗೆ ಈ ಇಂದ್ರಿಯಾದಿಗಳನ್ನು ಪ್ರಕೃತಿಯೊಳಗಿಂದ ಸೆಳೆದುಕೊಂಡು ಹುಟ್ಟುವುದನ್ನೂ ಸಾಯುವಾಗ ಅವುಗಳನ್ನು ಸೆಳೆದುಕೊಂಡು ಹೋಗುವುದನ್ನೂ ಯಾರೂ ಕಾಣುವುದಿಲ್ಲ. ಪುಷ್ಪದೊಳಗಿಂದ ಗಾಳಿಯು ಸುಗಂಧವನ್ನು ಹೀರಿಕೊಂಡು ಹೋಗುವಂತೆ, ಜೀವನು ಯಾರಿಗೂ ಕಾಣದಂತೆ ಈ ಇಂದ್ರಿಯಾದಿಗಳನ್ನು ಹೀರಿಕೊಂಡು ಹೋಗುತ್ತಾನೆ. ಆದರೆ, ಯೋಗಿಗಳ ಜ್ಞಾನಚಕ್ಷುವಿಗೆ ಇದು ಕಾಣುತ್ತದೆ. ಅದೇ ಮೇರೆಗೆ ಜೀವನಾಗಲಿ ಪರಮಾತ್ಮನಾಗಲಿ ಶರೀರದೊಳಗಿದ್ದುಕೊಂಡು ಈ

ಇಂದ್ರಿಯಗಳ ದ್ವಾರಾ ಗುಣಗಳನ್ನು ಅನುಭೋಗಿಸುತ್ತಾರೆ. ಅಂದರೆ ಕಿವಿ, ಕಣ್ಣು ಮುಂತಾದ ಇಂದ್ರಿಯಗಳಲ್ಲಿ ಇದ್ದುಕೊಂಡೇ ಜೀವಪರಮಾತ್ಮರು ವಿಷಯಗಳನ್ನು ಅನುಭೋಗಿಸುತ್ತಾರೆ. ಹೀಗೆ, ಈ ಪರಮಾತ್ಮಸ್ವರೂಪವು ಅತ್ಯಂತ ಲೋಕ ವಿಲಕ್ಷಣವಾಗಿದೆ.

ಈ ೧೫ನೆಯ ಅಧ್ಯಾಯದಲ್ಲಿ ಬಂದಿರುವ ಮೂರನೆಯ ವಿಷಯವೆಂದರೆ ಪರಮಾತ್ಮನ ಸರ್ವಾಂತರ್ಯಾಮಿತ್ವದ ಮತ್ತು ಸರ್ವೋತ್ತಮತ್ವದ ವರ್ಣನೆಯು. ಮುಂಚೆ ಆತನು ಸರ್ವಾಂತರ್ಯಾಮಿಯಾಗಿರುವುನೆಂಬುದು ಈ ರೀತಿಯಾಗಿ ವರ್ಣಿಸಲ್ಪಟ್ಟಿದೆ. ಸೂರ್ಯನಲ್ಲಿರುವ ಪ್ರಕಾಶವು ಸೂರ್ಯನ ಪ್ರಕಾಶವಲ್ಲ, ಭಗವಂತನ ಪ್ರಕಾಶವು. ಹಾಗೆಯೇ ಚಂದ್ರನಲ್ಲಿರುವ ಕಾಂತಿಯು ಚಂದ್ರನದಲ್ಲ, ಭಗವಂತನದು. ಅಗ್ನಿಯಲ್ಲಿರುವ ತೇಜವು ಅಗ್ನಿಯದಲ್ಲ, ಭಗವಂತನದು. ಪರಮಾತ್ಮನು ಅವುಗಳಲ್ಲಿ ಅಂತರ್ಯಾಮಿಯಾಗಿರುವುದರಿಂದಲೇ ಆ ಪದಾರ್ಥಗಳಿಗೆ ಆ ಸಾಮರ್ಥ್ಯವು ಬಂದಿದೆ. ಅದೇ ಮೇರೆಗೆ ಆತನು ಭೂಮಿಯನ್ನು ಪ್ರವೇಶ ಮಾಡಿ, ತನ್ನ ಶಕ್ತಿಯಿಂದ ಸರ್ವ ಪ್ರಾಣಿಗಳನ್ನೂ ಧಾರಣಮಾಡುತ್ತಾನೆ. ಅಮೃತ ಸ್ವರೂಪನಾದ ಸೋಮನಾಮಕನಾಗಿ ಚಂದ್ರನಲ್ಲಿದ್ದುಕೊಂಡು ಆತನು ಸಕಲ ಸಸ್ಯಾದಿಗಳನ್ನು ಅಭಿವೃದ್ಧಿಗೊಳಿಸುತ್ತಾನೆ. ಅಂದರೆ ವನಸ್ಪತಿ ಮುಂತಾದವುಗಳಿಗೆ ರಸವನ್ನು ಕೊಡುವವನು ಆ ಪರಮಾತ್ಮನು. ವೈಶ್ವಾನರನೆಂಬ ರೂಪವನ್ನು ಧಾರಣಮಾಡಿಕೊಂಡು ಆ ಪರಮಾತ್ಮನು ಜೀವಿಗಳ ದೇಹದಲ್ಲಿ ಇದ್ದುಕೊಂಡು ಚತುರ್ವಿಧ ಆಹಾರಗಳನ್ನು ಪಚನಮಾಡುತ್ತಾನೆ. ಯಾವತ್ತು ಪ್ರಾಣಿಗಳ ಹೃದಯದಲ್ಲಿ ಆತನು ಸನ್ನಿವಿಷ್ಟನಾಗಿರುತ್ತಾನೆ. ಮನುಷ್ಯನಲ್ಲಿರುವ ಸ್ಮರಣೆ, ಅನುಭವಜ್ಞಾನ, ವಿಪರೀತ ಜ್ಞಾನಕ್ಕೂ ಕೂಡ ಆ ಪರಮಾತ್ಮನೇ ಕಾರಣನು. ಸರ್ವ ವೇದಗಳಿಂದಲೂ ತಿಳಿಯಲ್ಪಡತಕ್ಕವನು ಆ ಪರಮಾತ್ಮನೇ, ವೇದವ್ಯಾಸಾವತಾರವನ್ನು ತಾಳಿ, ವೇದಾಂತಸೂತ್ರಗಳನ್ನು ಮಾಡಿದವನೂ ಆ ಪರಮಾತ್ಮನೇ. ವೇದಗಳ ರಹಸ್ಯವನ್ನು ತಿಳಿಯುವವನೂ ಆತನೊಬ್ಬನೇ. ಹೀಗೆ, ಎಲ್ಲೆಲ್ಲಿಯೂ ಆತನ ಅಂತರ್ಯಾಮಿತ್ವದ ಪ್ರಭಾವವೇ ಕಂಡು ಬರುತ್ತದೆ. ಇಲ್ಲಿ, ಇವೆಲ್ಲವುಗಳನ್ನು ಮಾಡುವವನು ನಾನು ಎಂದು ಶ್ರೀಕೃಷ್ಣನು ಹೇಳಿ, ಕೃಷ್ಣನೆಂದರೇನೇ ಆ ಪರಮಾತ್ಮನು ಎಂಬುದನ್ನು ಸ್ಪಷ್ಟಮಾಡಿರುವನು.

ಇನ್ನು ಕೊನೆಯ ವಿಷಯವೆಂದರೆ ಸರ್ವೋತ್ತಮತ್ವದ ವಿಷಯ. ಲೋಕದಲ್ಲಿ ಪುರುಷರೆಂಬವರು ಇಬ್ಬರು (೧) ಕ್ಷರ ಪುರುಷ (೨) ಅಕ್ಷರ ಪುರುಷ. ಬ್ರಹ್ಮಾದಿ ಮೊದಲ್ಗೊಂಡು ತೃಣದೇವರ ಪರ್ಯಂತ ಯಾವತ್ತು ಜೀವಿಗಳು ಅಂದರೆ ಯಾವತ್ತು ಜೀವರಾಶಿಗೆ ಕೂಡಿ ಕ್ಷರಪುರುಷವೆಂದು ಹೆಸರು. ಏಕೆಂದರೆ ಇವರೆಲ್ಲರೂ ನಾಶವುಳ್ಳವರು. ಚಿತ್ ಪ್ರಕೃತಿಯು ಅಥವಾ ಮಹಾಲಕ್ಷ್ಮಿಯು ನಾಶರಹಿತಳಾದ್ದರಿಂದ ಅಕ್ಷರಪುರುಷಳೆನ್ನಿಸುತ್ತಾಳೆ. ಆದರೆ ಇವರಿಬ್ಬರಿಗಿಂತಲೂ

ಶ್ರೇಷ್ಠನಾದ ಪುರುಷನೊಬ್ಬನಿರುತ್ತಾನೆ. ಆತನಿಗೇ ಪರಮಾತ್ಮನೆಂದು ಹೆಸರು. ಆತನು ಮೂರು ಲೋಕಗಳಲ್ಲಿಯೂ ಅಂತರ್ಯಾಮಿಯಾಗಿ ಇದ್ದುಕೊಂಡು ಆ ಮೂರೂ ಲೋಕಗಳನ್ನು ಧಾರಣಮಾಡುತ್ತಾನೆ. ಕ್ಷರಾಕ್ಷರರು ಚೇತನಮಾತ್ರರು, ಈ ಉತ್ತಮಪುರುಷನಾದರೋ ಪರಮಚೇತನನು. ಹೀಗಿರುವುದರಿಂದಲೇ ಆ ಪರಮಾತ್ಮನಿಗೆ ಲೌಕಿಕ ಗ್ರಂಥಗಳಲ್ಲಿಯೂ ವೇದಗಳಲ್ಲಿಯೂ ಪುರುಷೋತ್ತಮನೆಂದು ಹೆಸರು. ಸಾರಾಂಶ, ಶ್ರೀಕೃಷ್ಣನೇ ಸರ್ವೋತ್ತಮನು, ಸರ್ವಾಂತರ್ಯಾಮಿಯು ಎಂಬುದೇ ಈ ಅಧ್ಯಾಯದ ಒಟ್ಟು ತಾತ್ಪರ್ಯ.

೨೦ನೆಯ ಪ್ರಕರಣ

# ದೈವೀ ಸಂಪತ್ತು ಮತ್ತು ಆಸುರೀಸಂಪತ್ತು

೧೫ನೆಯ ಅಧ್ಯಾಯದಲ್ಲಿ ಮಾನಮೋಹಾದಿಗಳನ್ನು ಬಿಡುವುದು ಇವೇ ಮುಂತಾದವುಗಳು ಪರಮಾತ್ಮನ ಜ್ಞಾನಕ್ಕೂ ಮೋಕ್ಷವೆಂಬ ಪರಮಪುರುಷಾರ್ಥಕ್ಕೂ ಸಾಧನಗಳು ಎಂದೂ ಅಶುದ್ಧಿ, ಬುದ್ಧಿ, ಅವಿವೇಕತನ ಇವೇ ಮುಂತಾದವುಗಳು ಅವಕ್ಕೆ ವಿರೋಧಿಯಾದವುಗಳೆಂದೂ ಹೇಳಿತು. ಆ ವಿಷಯವೇ ಇಲ್ಲಿ ಬೇರೊಂದು ರೀತಿಯಲ್ಲಿ ವಿಸ್ತಾರವಾಗಿ ವರ್ಣಿಸಲ್ಪಟ್ಟಿದೆ. ಪುರುಷಾರ್ಥಕ್ಕೆ ಅನುಕೂಲವಾದ ಗುಣಗಳಿಗೆ ದೈವೀಸಂಪತ್ತೆಂದೂ ಅದಕ್ಕೆ ವಿರುದ್ಧವಾಗಿರುವ ಗುಣಗಳಿಗೆ ಆಸುರೀ ಸಂಪತ್ತೆಂದೂ ಹೆಸರಿಟ್ಟು, ಆ ಗುಣಗಳುಳ್ಳವರ ಲಕ್ಷಣಗಳು ಯಾವುವೆಂಬುದನ್ನು ಈ ೧೬ನೆಯ ಅಧ್ಯಾಯದಲ್ಲಿ ಹೇಳಿದೆ.

ದೈವೀ ಸಂಪತ್ತುಳ್ಳವನ ಮುಖ್ಯ ಲಕ್ಷಣಗಳು ೨೬. ಅವು ಯಾವುವೆಂದರೆ (೧) ಅಭಯ (೨) ಸತ್ವಸಂಶುದ್ಧಿ ಎಂದರೆ ನಿರ್ಮಲವಾದ ಮನಸ್ಸು (೩) ಜ್ಞಾನಸಂಪಾದನೆಯಲ್ಲಿ ಆಸಕ್ತಿ (೪) ಸತ್ಪಾತ್ರದಲ್ಲಿ ದಾನ (೫) ಇಂದ್ರಿಯನಿಗ್ರಹ (೬) ಯಜ್ಞ (೭) ವೇದಾಧ್ಯಯನ (೮) ಬ್ರಹ್ಮಚರ್ಯಾದಿ ತಪಸ್ಸು (೯) ಮನ ವಚನ ಮತ್ತು ಕರ್ಮ ಇವುಗಳಲ್ಲಿ ಸರಳತೆ ಎಂದರೆ ತ್ರಿಕರಣ ಶುದ್ಧಿ (೧೦) ಅಹಿಂಸೆ (೧) ಸತ್ಯ (೧೨) ಕ್ರೋಧವಿಲ್ಲದಿರುವುದು (೧೩) ತ್ಯಾಗಬುದ್ಧಿ (೧೪) ಶಾಂತಿ ಎಂದರೆ ಭಗವನ್ನಿಷ್ಠಬುದ್ಧಿ (೧೫) ಪರೋಪದ್ರವ ನಿಮಿತ್ತವಾದ ಚಾಡಿಯನ್ನು ಹೇಳದಿರುವುದು (೧೬) ಭೂತದಯೆ (೧೭) ವಿಷಯಸುಖಗಳಲ್ಲಿ ಪ್ರೀತಿಯಿಲ್ಲದಿರುವುದು (೧೮) ಮೃದು ಸ್ವಭಾವ (೧೯) ಅಕಾರ್ಯಮಾಡುವುದಕ್ಕೆ ನಾಚುವುದು (೨೦) ಅಚಾಪಲ ಎಂದರೆ ಬುದ್ದಿಯ ಸ್ಥಿರತ್ವ ೨೧) ತೇಜ (೨೨) ಕ್ಷಮಾಬುದ್ಧಿ (೨೩) ಧೈರ್ಯ (೨೪) ಅಂತರ್ಬಾಹ್ಯ ಶುಚಿತ್ವ (೨೫) ಪರರಿಗೆ ದ್ರೋಹ ಬಯಸದಿರುವುದು (೨೬) ಅಹಂಕಾರವಿಲ್ಲದಿರುವುದು. ಈ ಸದ್ಗುಣಗಳನ್ನು ಮೋಕ್ಷವನ್ನು ಅಪೇಕ್ಷಿಸುವವನು ಅವಶ್ಯವಾಗಿ ಸಂಪಾದಿಸತಕ್ಕದ್ದು. ಇವು ದೈವೀಸಂಪತ್ತುಳ್ಳವನ ಮುಖ್ಯ ಲಕ್ಷಣಗಳು. (೧) ದಂಭ (೨) ದರ್ಪ (೩) ಅಭಿಮಾನ (೪) ಕ್ರೋಧ (೫) ಕ್ರೂರತನ ಮತ್ತು (೬) ಅಜ್ಞಾನ ಇವು ಆರು ಆಸುರೀಸಂಪತ್ತುಳ್ಳವನ ಮುಖ್ಯ ಲಕ್ಷಣಗಳು. ಇವು ಮೋಕ್ಷಕ್ಕೆ ವಿರುದ್ಧವಾಗಿರುವ ದುರ್ಗುಣಗಳು. ಇವುಗಳನ್ನು ಮೋಕ್ಷಾಪೇಕ್ಷಿಯು ಅವಶ್ಯವಾಗಿ ತ್ಯಜಿಸತಕ್ಕದ್ದು. ದೈವೀಸಂಪತ್ತುಳ್ಳವನೇ ಮೋಕ್ಷವನ್ನು ಪಡೆಯುತ್ತಾನಲ್ಲದೆ ಆಸುರೀಸಂಪತ್ತುಳ್ಳವನ್ನು ಮೋಕ್ಷವನ್ನು

ಎಂದಿಗೂ ಪಡೆಯಲಾರನು, ಆತನಿಗೆ ವಿವಿಧವಾದ ನರಕಗಳು ಕಟ್ಟಿಟ್ಟವುಗಳು. ಅರ್ಜುನನು ದೈವೀಸಂಪತ್ತುಳ್ಳವನು. ಆದಕಾರಣ ಆತನು ಅಂಜುವ ಕಾರಣವಿಲ್ಲ.

ಈ ಜಗತ್ತಿನಲ್ಲಿರುವ ಯಾವತ್ತು ಜನರನ್ನು ವರ್ಗೀಕರಣಮಾಡಿ, ಎಲ್ಲರನ್ನೂ ಇವೆರಡೇ ವರ್ಗಗಳಲ್ಲಿ ಸೇರಿಸಬಹುದು. ದೈವೀಸಂಪತ್ತುಳ್ಳವರ ಲಕ್ಷಣಗಳನ್ನು ಮೇಲೆ ವಿಸ್ತಾರವಾಗಿ ಕೊಡಲಾಯಿತು. ಆಸುರೀಸಂಪತ್ತನ್ನು ಸಂಕ್ಷೇಪವಾಗಿ ಹೇಳಲಾಯಿತು. ಆದರೆ, ಆ ಆಸುರೀಸಂಪತ್ತನ್ನು ಇದಕ್ಕಿಂತ ಹೆಚ್ಚಿಗೆ ವಿಸ್ತಾರವಾಗಿ ವರ್ಣಿಸುವುದು ಅವಶ್ಯವು. ಏಕೆಂದರೆ, ಮನುಷ್ಯನು ಜಾರುವುದು ಇಲ್ಲಿಯೇ. ಆದಕಾರಣ, ಆತನಿಗೆ ಚೆನ್ನಾಗಿ ಎಚ್ಚರಿಕೆಯನ್ನು ಕೊಡುವುದಕ್ಕೋಸ್ಕರ ಅಂಥ ಆಸುರೀಸಂಪತ್ತುಳ್ಳವರ ಗುಣಗಳನ್ನು ಇಲ್ಲಿ ಹೆಚ್ಚಿಗೆ ವಿವರಿಸುತ್ತೇವೆ ಕೇಳಿರಿ.

ಆಸುರೀಸಂಪತ್ತುಳ್ಳವರು ವಿಹಿತಕರ್ಮಮಾಡುವುದನ್ನು ಅರಿಯರು, ಅವಿಹಿತಕರ್ಮಮಾಡುವುದನ್ನು ಬಿಡುವುದನ್ನೂ ಅರಿಯರು, ಅವರಿಗೆ ಅಂತರಂಗ ಶುಚಿಯೆಂದರೇನು ಬಹಿರಂಗರುಚಿಯೆಂದರೇನು ಇವು ಗೊತ್ತಿರುವುದಿಲ್ಲ, ಆಚಾರಶೂನ್ಯರು ಅವರು, ಸತ್ಯಕ್ಕೆ ಬಾಹಿರರು ಅವರು, ಜಗತ್ತು ಅಸತ್ಯವೆಂದೂ ಅದು ಆಧಾರರಹಿತವಾದುದೆಂದೂ ಅದಕ್ಕೆ ಈಶ್ವರನೊಬ್ಬನು ಇಲ್ಲವೆಂದೂ ಅವರು ನುಡಿಯುವರು. ಜಗತ್ತು ಪರಸ್ಪರವಾಗಿ ಹುಟ್ಟಿರುವುದಿಲ್ಲವೆಂದು ಅವರ ಅಂಬೋಣವು. ನಿಜವಾಗಿ ಜಗತ್ತು ಹಿಂದಕ್ಕೆ ಮೂರನೆಯ ಅಧ್ಯಾಯದಲ್ಲಿ ಹೇಳಿದಂತೆ ಮಳೆಯಿಂದ ಅನ್ನ, ಅನ್ನದಿಂದ ಪ್ರಾಣಿಗಳು ಮುಂತಾಗಿ ಒಂದರಿಂದ ಒಂದು ಹುಟ್ಟಿದೆ. ಆದರೆ ಈ ಅಸುರ ಜನರು ಇದನ್ನು ಒಪ್ಪುವುದಿಲ್ಲ. ಹಾಗಾದರೆ ಜಗತ್ತು ಹೇಗೆ ಹುಟ್ಟಿತು ಎಂದು ಅವರನ್ನು ಕೇಳಿದರೆ ಅದು ತನ್ನಿಂದ ತಾನೇ ಹುಟ್ಟಿತೆಂದು ಅವರು ಉತ್ತರಕೊಡುತ್ತಾರೆ. ಅಥವಾ ಪ್ರಾಣಿಗಳು ಹುಟ್ಟುವುದಕ್ಕೆ ಕಾಮವೇ ಕಾರಣವೆಂದೂ ಅದಕ್ಕೆ ಮತ್ತಾವ ಕಾರಣದ ಆವಶ್ಯಕತೆಯಿಲ್ಲವೆಂದೂ ಅವರು ಹೇಳುವರು. ಹೀಗೆ ಅವರಿಗೆ ವಿಪರೀತ ಬುದ್ಧಿಯು ಉಂಟಾಗುವುದರಿಂದ ಅವರು ಅವಿವೇಕಿಗಳಂತೆ ವರ್ತಿಸುತ್ತಾರೆ, ದುಷ್ಟ ಸ್ವಭಾವದವರಾಗುತ್ತಾರೆ; ಮತ್ತು ಅದರ ಮೂಲಕ ಘೋರವಾದ ಕರ್ಮಗಳನ್ನು ಮಾಡುವುದರಲ್ಲಿ ನಿರತರಾಗುತ್ತಾರೆ. ಅವರು ಜಗತ್ತಿಗೆ ಭಯಂಕರ ಶತ್ರುಗಳು ಅವರ ಮೂಲಕ ಜಗತ್ತು ನಾಶವಾಗುತ್ತದೆ. ಅಂಥವರ ಆಶೆಗೆ ಪಾರಾವಾರವೇ ಇರುವುದಿಲ್ಲ. ಅವರಲ್ಲಿ ದಂಭ, ದುರಭಿಮಾನ ದುರ್ಮದ ಮುಂತಾದ ದುರ್ಗುಣಗಳು ತುಂಬಿರುತ್ತವೆ. ತಮ್ಮ ಮನದಲ್ಲಿ ಹುಟ್ಟಿದ ದುರ್ವಾಸನೆಗಳಿಗೆ ಅವರು ಗಟ್ಟಿಯಾಗಿ ಅಂಟಿಕೊಂಡು, ಅತ್ಯಂತ ಅಶುದ್ಧವಾದ ಕೃತ್ಯಗಳನ್ನು ಮಾಡತೊಡಗುತ್ತಾರೆ. ಅವರಿಗೆ ಕೊನೆಯವರೆಗೆ ಒಂದಿಲ್ಲೊಂದು ಚಿಂತೆ ಬಿಡುವುದಿಲ್ಲ, ಅವರು

ಯಾವಾಗಲೂ ಕಾಮೋಪಭೋಗವೇ ಹೆಚ್ಚಿನ ಸೌಖ್ಯವೆಂದು ಬಗೆಯುತ್ತಾರೆ, ಅದಕ್ಕಿಂತ ಜಗತ್ತಿನಲ್ಲಿ ಹೆಚ್ಚಿನ ಸೌಖ್ಯವೇ ಇಲ್ಲವೆಂದು ಅವರ ಅಭಿಪ್ರಾಯ. ಆದಕಾರಣ ಅವರಿಗೆ ದಿನಾಲು ನೂರೆಂಟು ಆಶೆಗಳು, ಅವುಗಳ ಬಂಧನದಲ್ಲಿ ಸಿಕ್ಕು ಅವರು ಒದ್ದಾಡುತ್ತಿರುತ್ತಾರೆ. ಆ ಕಾಮಗಳ ಭೋಗಾರ್ಥವಾಗಿ ಅವರು ಯಾವಾಗಲೂ ಕಾಮಕ್ರೋಧಪರಾಯಣರಾಗಿ ಅನ್ಯಾಯದಿಂದ ಧನವನ್ನು ಕೂಡಿ ಹಾಕಲಿಕ್ಕೆ ಉದ್ಯುಕ್ತರಾಗುತ್ತಾರೆ. ಇಂದು ಇದನ್ನು ಗಳಿಸಿದೆ, ನಾಳೆ ಅದನ್ನು ಗಳಿಸುವೆನು, ಇಂದು ನನ್ನೀ ಮನೋರಥವು ಕೈಗೂಡಿತು, ನಾಳೆ ಆ ನನ್ನ ಮನೋರಥವನ್ನು ಪೂರೈಸಿಕೊಳ್ಳುವೆನು, ಇಂದು ಇಷ್ಟು ಹಣವಿದೆ, ನಾಳೆ ಇಷ್ಟು ಹಣ ದೊರಕಿಸುವೆನು, ಇಂದು ಈ ಹಗೆಯನ್ನು ಕೊಂದೆನು, ನಾಳೆ ಮತ್ತೊಬ್ಬರನ್ನು ಕೊಲ್ಲುವೆನು, ನಾನೇ ಈಶ್ವರನು, ನಾನೇ ಭೋಗಿಯು, ನಾನೇ ಸಿದ್ಧಪುರುಷನು, ನಾನೇ ಬಲವಂತನು, ನಾನೇ ಸುಖಿಯಾದ ಪ್ರಾಣಿಯು, ನಾನೇ ಧನವಂತನು, ನಾನೇ ಕುಲೀನನು, ನನಗೆ ಸರಿಯಾರಿರುವರು, ಇಗೋ ನಾನು ಇಷ್ಟು ಯಜ್ಞಗಳನ್ನು ಮಾಡುವೆ, ಇಷ್ಟು ದಾನಗಳನ್ನು ಮಾಡುವೆ, ಮತ್ತು ಅವುಗಳಿಂದಾಗುವ ಆನಂದವನ್ನು ಪಡೆಯುವೆನು ಇವೇ ಮುಂತಾಗಿ ಈ ಅಸುರಜನರು ಅಜ್ಞಾನದಿಂದ ವಿಮೋಹಿತರಾಗಿರುತ್ತಾರೆ, ಅವರ ಚಿತ್ರವು ಸ್ಥಿರವಾಗಿರುವುದಿಲ್ಲ, ಮನಸ್ಸಿನಲ್ಲಿ ಅವರಿಗೆ ನೂರೆಂಟು ಚಿಂತೆಗಳು ತಪ್ಪುವುದಿಲ್ಲ. ಹೊರಗೇನೋ ಅವರು ಕಾಣಲಿಕ್ಕೆ ಚಿಂತೆಯಿಲ್ಲದವರಂತೆ ತೋರುತ್ತಾರೆ. ಆದರೆ ನಿಜವಾಗಿ ಅವರ ಮನಸ್ಸಿನಲ್ಲಿ ನೂರೆಂಟು ಮುಳ್ಳುಗಳು ಚುಚ್ಚುತ್ತಿರುತ್ತವೆ, ಅವರು ಯಾವಾಗಲೂ ಮೋಹಜಾಲದಲ್ಲಿ ಸಿಕ್ಕಿರುತ್ತಾರೆ, ವಿಷಯಭೋಗಗಳಲ್ಲಿ ಸದಾ ಆಸಕ್ತರಾಗಿರುತ್ತಾರೆ. ಇಂಥ ಆಸುರಸ್ವಭಾವದವರು ಕೊನೆಗೆ ನರಕದಲ್ಲಿ ಬೀಳುವುದೇ ನಿಶ್ಚಯ.

**ಅನ್ನಮದ ಅರ್ಥಮದ ಅಖಿಲ ವೈಭವದ ಮದ**
**ಮುನ್ನ ಪ್ರಾಯದ ಮದವು ರೂಪಮದವು**
**ತನ್ನ ಸತ್ವದನದ ಧಾತ್ರಿವಶವಾದ ಮದ |**
**ಇನ್ನು ತನಗೆದುರಿಲ್ಲವೆಂಬ ಮದದಿಂದ**
**ಇಷ್ಟು ದೊರಕಿದರೆ ಮತ್ತಿಷ್ಟು ಬೇಕೆಂಬಾಶೆ**
**ಅಷ್ಟು ದೊರಕಿದರು ಮತ್ತಷ್ಟರಾಶೆ**

-ಪುರಂದರದಾಸರು

ಇಂಥವರು ತಾವೇ ಚಂದ್ರರು ತಾವೇ ಇಂದ್ರರು ಎಂದು ಭಾವಿಸುತ್ತಾರೆ, ಒಬ್ಬರಿಗೂ ಅವರು ಬಗ್ಗಿ ನಡೆಯುವುದಿಲ್ಲ, ಹಣದಿಂದ ಹುಟ್ಟಿದ ಸೊಕ್ಕಿನಿಂದ ಮೆರೆಯುತ್ತಾರೆ. ಅವರು ಯಜ್ಞಾದಿಗಳನ್ನು ಮಾಡಿದರೂ ಕೂಡ ಅದೆಲ್ಲವೂ ಕೇವಲ ಡಾಂಭಿಕತನಕ್ಕೋಸ್ಕರ. ಅವರು

ಯಜ್ಞಗಳನ್ನು ವಿಧಿಪೂರ್ವಕವಾಗಿ ಮಾಡುವುದೇ ಇಲ್ಲ. ಅಹಂಕಾರ, ತಾವೇ ಬಲವಂತರೆಂಬ ಭಾವನೆ, ಮೈಸೊಕ್ಕು, ಕಾಮ, ಕ್ರೋಧ ಇವುಗಳಿಂದ ಕೂಡಿದವರಾಗಿ ಅವರು ತಮ್ಮ ದೇಹದಲ್ಲಿಯೂ ಸರ್ವಪ್ರಾಣಿಗಳ ದೇಹದಲ್ಲಿಯೂ ವಾಸಿಸುವ ಪರಮಾತ್ಮನನ್ನು ಲೆಕ್ಕಿಸದೆ ಆ ಪರಮಾತ್ಮನ ದ್ವೇಷವನ್ನು ಮಾಡುತ್ತಾರೆ. ಇಂಥ ನರಾಧಮರನ್ನು ಪರಮಾತ್ಮನು ಪುನಃ ಪುನಃ ಸಂಸಾರದಲ್ಲಿ ಅಸುರಯೋನಿಗಳಲ್ಲಿಯೇ ಹುಟ್ಟಿಸುತ್ತಾನೆ. ಹೀಗೆ ಅವರು ತಮ್ಮ ದುಷ್ಕೃತ್ಯಗಳ ಮೂಲಕ ಮತ್ತೆ ಮತ್ತೆ ಆಸುರ ಯೋನಿಗಳಲ್ಲಿ ಜನ್ಮಗಳನ್ನು ತಾಳಿ ಆ ಮೂಢರು ಕೊನೆಗೂ ಪರಮಾತ್ಮನನ್ನು ಪಡೆಯದೆ ಅಧಮಗತಿಯನ್ನು ಹೊಂದುತ್ತಾರೆ.

ಒಟ್ಟಿಗೆ ಹೇಳುವುದೇನೆಂದರೆ ಕಾಮ ಕ್ರೋಧ ಮತ್ತು ಮೋಹ ಇವು ಮೂರು ನರಕದ ಮಹಾದ್ವಾರಗಳು. ಆದಕಾರಣ, ಮನುಷ್ಯನು ಮುಂಚೆ ಈ ಮೂರು ಮಹಾದ್ವಾರಗಳನ್ನು ತಪ್ಪಿಸಬೇಕು. ಕಾಮ ಕ್ರೋಧ ಮತ್ತು ಲೋಭ ಇವು ಮೂರನ್ನು ಬಿಟ್ಟರೆ ಆಗ ಆತನಿಗೆ ತನಗೆ ಕಲ್ಯಾಣವಾವುದೆಂಬುದು ತಿಳಿದು ಹಾಗೆ ಆಚರಿಸುವ ಬುದ್ಧಿಯುಂಟಾಗುತ್ತದೆ. ಆ ಮೇರೆಗೆ ಆ ಆಚರಣೆಮಾಡಿದನೆಂದರೆ ಆತನಿಗೆ ಉತ್ತಮವಾದ ಗತಿಯು ಉಂಟಾಗುತ್ತದೆ.

ಮೂಢರು ಯಜ್ಞಾದಿಗಳನ್ನು ವಿಧಿಪೂರ್ವಕವಾಗಿ ಮಾಡುವುದಿಲ್ಲವೆಂದು ಹೇಳಿತಷ್ಟೆ, ಹೀಗೆ ಯಾವನು ಶಾಸ್ತ್ರವಿಧಿಯನ್ನು ಬಿಟ್ಟು, ತನ್ನ ಮನಸ್ಸಿಗೆ ಬಂದಂತೆ ಕಾರ್ಯಮಾಡಲಿಕ್ಕೆ ಪ್ರವರ್ತಿಸುತ್ತಾನೋ ಆತನಿಗೆ ಸಿದ್ಧಿಯೂ ಇಲ್ಲ, ಸೌಖ್ಯವೂ ಇಲ್ಲ, ಉತ್ತಮಗತಿಯೂ ಇಲ್ಲ. ಆದಕಾರಣ, ಕಾರ್ಯವಾವುದು ಅಕಾರ್ಯವಾವುದು ಎಂಬುದನ್ನು ತಿಳಿದುಕೊಳ್ಳುವುದಕ್ಕೆ ಶಾಸ್ತ್ರಗಳಿಗೇ ಶರಣುಹೋಗಬೇಕು. ಶಾಸ್ತ್ರವಿಧಾನವನ್ನು ತಿಳಿದುಕೊಂಡೇ ಮನುಷ್ಯನು ಕರ್ಮಗಳನ್ನು ಮಾಡಬೇಕು.

೨೧ನೆಯ ಪ್ರಕರಣ

( ೧೭ನೆಯ ಅಧ್ಯಾಯದ ತಾತ್ಪರ್ಯ)

# ಗುಣತ್ರಯ ವಿಭಾಗ

ಶಾಸ್ತ್ರವಿಧಾನವನ್ನರಿತುಕೊಂಡು ಕಾರ್ಯವನ್ನು ಮಾಡಬೇಕೆಂದು ಹಿಂದೆ ಹೇಳಿತು. ಆದರೆ, ಶಾಸ್ತ್ರವಿಧಿಯನ್ನು ಬಿಟ್ಟು ಕರ್ಮ ಮಾಡಿದವರ ಹಣೆಯ ಬರಹವೇನು ಎಂದು ಕೇಳಿದರೆ, ಅಂಥವರಲ್ಲಿ ಎರಡು ವರ್ಗಗಳು (೧) ಶಾಸ್ತ್ರವಿಧಿಯು ಗೊತ್ತಿದ್ದೂ ಅದನ್ನು ಬಿಟ್ಟು ಕರ್ಮಮಾಡುವವರು (೨) ಮತ್ತು ಶಾಸ್ತ್ರವಿಧಿಯನ್ನರಿಯದೆ ಇದ್ದ ಮೂಲಕ ಅದನ್ನು ಬಿಟ್ಟು ಕರ್ಮಮಾಡುವವರು. ಶಾಸ್ತ್ರವಿಧಿಯು ಗೊತ್ತಿದ್ದರೂ ಅದನ್ನು ಅನುಸರಿಸದಿದ್ದವರು ತಾಮಸರೇ ಸರಿ. ಏಕೆಂದರೆ, ಅವರು ತಪ್ಪು ಕರ್ಮವನ್ನು ಬುದ್ಧ್ಯಾ ಮಾಡಿದಂತಾಗುತ್ತದೆ. ಆದಕಾರಣ, ಅವರನ್ನುನಾವು ತಾಮಸರೊಳಗೇ ಸೇರಿಸುತ್ತೇವೆ. ಇನ್ನು, ಶಾಸ್ತ್ರವಿಧಿಯು ಗೊತ್ತೇ ಇರದ ಮೂಲಕ ತಪ್ಪು ಕರ್ಮಗಳನ್ನು ಮಾಡುವವರು ಅಷ್ಟು ನೀಚರಲ್ಲ. ಏಕೆಂದರೆ, ಅವರಲ್ಲಿ ಅಜ್ಞಾನ ಮಾತ್ರವೇ ಇರುತ್ತದೆ, ಅವರಲ್ಲಿ ದುರ್ಬುದ್ಧಿಯಿರುವುದಿಲ್ಲ. ಕರ್ಮವನ್ನು ಮಾಡಬೇಕೆಂಬ ಬುದ್ಧಿಯೇನೋ ಅವರಲ್ಲಿ ಇರುತ್ತದೆ. ಆದರೆ, ಆ ಕರ್ಮವನ್ನು ವಿಧಾನಪೂರ್ವಕವಾಗಿ ಹೇಗೆ ಮಾಡಬೇಕೆಂಬುದನ್ನು ಅವರು ಅರಿಯರು. ಒಟ್ಟಿಗೆ ಹೇಳುವುದೆಂದರೆ, ಅವರಲ್ಲಿ ಶ್ರದ್ಧೆಯಿರುತ್ತದೆ, ಶಾಸ್ತ್ರವಿಧಿಯ ಜ್ಞಾನವಿರುವುದಿಲ್ಲ. ಅಂಥವರಲ್ಲಿಯೂ ನಾವು ಸಾತ್ವಿಕ ರಾಜಸ ತಾಮಸಗಳೆಂದು ಮೂರು ವರ್ಗಗಳನ್ನು ಮಾಡಬಹುದು. ಅವರವರ ಶ್ರದ್ಧೆಯ ಮೇರೆಗೆ ನಾವು ಈ ವಿಭಾಗಗಳನ್ನು ಮಾಡುತ್ತೇವೆ. ಅವರೆಲ್ಲರಲ್ಲಿಯೂ ಶ್ರದ್ಧೆಯಿರುತ್ತದೆಂದು ಹೇಳಿದ ಮಾತ್ರಕ್ಕೆ ಆ ಶ್ರದ್ಧೆಯು ಒಂದೇ ತರಹದ್ದಿರುತ್ತದೆಂದು ತಿಳಿಯಕೂಡದು. ಶ್ರದ್ಧೆಯಲ್ಲಿಯೂ ಮೂರು ವಿಧಗಳಿವೆ. ಯಾವನ ಜೀವನ ಸ್ವರೂಪವು ಸಾತ್ವಿಕವಿದೆಯೋ ಆತನಲ್ಲಿ ಸಾತ್ವಿತ ಶ್ರದ್ಧೆಯಿರುತ್ತದೆ, ಯಾವನ ಜೀವನಸ್ವರೂಪವು ರಾಜಸವಿರುತ್ತದೆಯೋ ಅವನ ಶ್ರದ್ಧೆಯು ರಾಜಸವಿರುತ್ತದೆ, ಮತ್ತು ಯಾವನ ಜೀವನಸ್ವರೂಪವು ತಾಮಸವಿರುತ್ತದೆಯೋ ಅವನ ಶ್ರದ್ಧೆಯು ತಾಮಸಶ್ರದ್ಧೆಯೆಂದು ತಿಳಿಯಬೇಕು. ಸಾರಾಂಶ, ಜೀವರುಗಳಲ್ಲಿ ಮೂರು ತರಹದ ಜೀವಗಳು. ಸಾತ್ವಿಕ ಜೀವರು ಕೆಲವರು, ರಾಜಸರು ಕೆಲವರು, ತಾಮಸರು ಕೆಲವರು. ಅವರವರ ಜೀವನಸ್ವರೂಪಕ್ಕೆ ಅನುಗುಣವಾಗಿ ಅವರ ಶ್ರದ್ಧೆಯಿರುತ್ತದೆ. ಎಂದರೆ, ಶ್ರದ್ಧೆಯೆಂಬುದು ಅವರ ಜೀವನಸ್ವರೂಪವು. ಆ ಶ್ರದ್ಧೆಯ ಮೂಲಕ, ಅವರು, ಶಾಸ್ತ್ರವಿಧಿ ಗೊತ್ತಿಲ್ಲದಿದ್ದರೂ, ಆ ಶ್ರದ್ಧೆಗೆ ಅನುರೂಪವಾದ ಆಚರಣೆಯುಳ್ಳವರಾಗುತ್ತಾರೆ. ಇವರು

ಸಾತ್ವಿಕಜೀವನರು, ಇವರು ರಾಜಸಜೀವರು, ಇವರು ತಾಮಸಜೀವರು ಎಂಬುದನ್ನು ತಿಳಿದುಕೊಳ್ಳುವುದಕ್ಕೆ ಅವರವರ ಶ್ರದ್ಧೆಯೇ ಹೆಗ್ಗುರುತು. ಸಾತ್ವಿಕ ಶ್ರದ್ಧೆಯುಳ್ಳವರು ದೇವತೆಗಳನ್ನೂ ರಾಜಸಶ್ರದ್ಧೆಯುಳ್ಳವರು ಯಕ್ಷ ರಾಕ್ಷಸರನ್ನೂ ತಾಮಸಶ್ರದ್ಧೆಯುಳ್ಳವರು ಭೂತಪ್ರೇತಗಳನ್ನೂ ಪೂಜಿಸುತ್ತಾರೆ. ಅವರವರು ಪೂಜಿಸುವ ವಿಧಿಯಮೇಲಿಂದ ಅವರ ಜೀವನ ಸ್ವರೂಪವನ್ನು ಗುರುತಿಸಬಹುದು. ಇವರಲ್ಲಿ ತಾಮಸಜನರು ಭೂತ ಪ್ರೇತಗಳನ್ನು ಮಾತ್ರವೇ ಪೂಜಿಸುತ್ತಾರೆಂತಲ್ಲ. ಅವರು ಶಾಸ್ತ್ರಕ್ಕೆ ವಿಹಿತವಲ್ಲದ ಘೋರವಾದ ತಪಸ್ಸುಗಳನ್ನು ದಂಭಾಹಂಕಾರಸಂಯುಕ್ತರಾಗಿಯೂ ಕಾಮರಾಗಬಲಗಳಿಂದ ಕೂಡಿದವರಾಗಿಯೂ ಆಚರಿಸುತ್ತಾರೆ. ಇವರು ಶರೀರದಲ್ಲಿರುವ ಲಕ್ಷ್ಮಿ ಮುಂತಾದ ದೇವತೆಗಳ ಸಮೂಹವನ್ನೂ ಇವರೆಲ್ಲರಿಗೂ ನಿಯಾಮಕನಾಗಿರುವ ಪರಮಾತ್ಮನನ್ನೂ ಕೂಡ ಹಿಂಡಿತೆಗೆಯುತ್ತಾರೆ, ಅಂದರೆ ತಿರಸ್ಕಾರಬುದ್ಧಿಯಿಂದ ನೋಡುತ್ತಾರೆ. ಇಂಥ ಅವಿವೇಕಿಗಳು ನಿಶ್ಚಯವಾಗಿ ಅಸುರರೆಂದೇ ತಿಳಿಯಬೇಕು.

ಇದಾಯಿತು ಶ್ರದ್ಧಾತ್ರಯವಿಭಾಗ. ಇದೇ ಮೇರೆಗೆ ನಾವು ಅವರವರು ತೆಗೆದುಕೊಳ್ಳುವ ಆಹಾರ, ಅವರವರು ಮಾಡುವ ಯಜ್ಞ ಯಾಗಾದಿಗಳು ತಪಸ್ಸುಗಳು ಮತ್ತು ದಾನಗಳು ಇವುಗಳ ಮೇಲಿಂದಲೂ ಅವರು ಸಾತ್ವಿಕರೋ ರಾಜಸರೋ ತಾಮಸರೋ ಎಂಬುದನ್ನು ತಿಳಿದುಕೊಳ್ಳಬಹುದು. ಸಾತ್ವಿಕರ ಆಹಾರವು ಆಯುಷ್ಯ, ಸತ್ವ, ಬಲ, ಆರೋಗ್ಯ, ಸುಖ, ಪ್ರೀತಿ ಇವುಗಳನ್ನು ಹೆಚ್ಚಿಸುವಂಥದು ಇರುತ್ತದೆ. ಇಂಥ ಆಹಾರಗಳು ಯಾವವೆಂದರೆ ರಸಭರಿತವಾದವುಗಳು, ಸ್ನಿಗ್ಧವಾದವುಗಳು ಅಂದರೆ ತೈಲಸಾರವುಳ್ಳವುಗಳು, ತಿಂದಬಳಿಕ ದೀರ್ಘ ಕಾಲದವರೆಗೆ ಸುಪರಿಣಾಮವನ್ನುಂಟುಮಾಡುವಂಥವುಗಳು, ಮನಸ್ಸಿಗೆ ಆಹ್ಲಾದಕರವಾದವುಗಳು. ಇಂಥವುಗಳು ಸಾತ್ವಿಕರಿಗೆ ಪ್ರಿಯವಾಗಿರುವ ಆಹಾರಗಳು. ಅತಿಕಟು, ಅತಿ ಹುಳಿ, ಅತಿ ಉಪ್ಪು, ಅತಿ ಉಷ್ಣ ಅತಿ ತೀಕ್ಷ್ಣ ಅತಿ ರುಕ್ಷ ಅಂದರೆ ನೀರಸ, ಅತಿ ದಾಹವುಳ್ಳ ಆಹಾರಗಳು ರಾಜಸರಿಗೆ ಇಷ್ಟವಾದವುಗಳು. ಅವು ದುಃಖ ಶೋಕಗಳನ್ನು ಕೊಡುವಂಥವೂ ರೋಗಗಳನ್ನು ಹುಟ್ಟಿಸುವಂಥವೂ ಇರುತ್ತವೆ. ಆರಿದ, ರಸವಿಹೀನವಾದ, ಹೊಲಸುನಾರುವ, ಹಳಸಿದ, ಎಂಜಲದ ಮತ್ತು ಅಪವಿತ್ರವಾದ ಆಹಾರವು ತಾಮಸರಿಗೆ ಪ್ರಿಯವಾದುದು.

ಯಜ್ಞಗಳಲ್ಲಿಯೂ ಮೂರುವಿಧ. ಫಲಾಕಾಂಕ್ಷೆಯಿಲ್ಲದೆ, ವಿಧಿಯುಕ್ತವಾಗಿ, ಕರ್ತವ್ಯವೆಂದು ತಿಳಿದುಮಾಡುವ ಯಜ್ಞವು ಸಾತ್ವಿಕವು. ಫಲಾಭಿಸಂಧಿಯುಕ್ತವಾಗಿಯೂ ದಂಭಕ್ಕೋಸ್ಕರವೂ ಮಾಡುವ ಯಜ್ಞವು ರಾಜಸವು. ವಿಧಿಹೀನವಾಗಿಯೂ ದೇವತೆಗಳಿಗೆ ಅನ್ನ

ಕೊಡದೆಯೂ ಮಂತ್ರ ಉಚ್ಚಾರಣೆಮಾಡದೆಯೂ ದಕ್ಷಿಣೆ ಮುಂತಾದವುಗಳನ್ನು ಕೊಡದೆಯೂ ಶ್ರದ್ಧಾವಿರಹಿತವಾಗಿಯೂ ಮಾಡಿದ ಯಜ್ಞವು ತಾಮಸವು.

ತಪಸ್ಸಿನಲ್ಲಿ ಮೂರುವಿಧ. ದೇವರು, ದ್ವಿಜರು, ಪ್ರಾಜ್ಞರು ಇವರೇ ಮುಂತಾದವರನ್ನು ಪೂಜಿಸುವುದು, ಅಂತರ್ಬಾಹ್ಯಶುಚಿತ್ವ, ಸರಳತನ, ಬ್ರಹ್ಮಚರ್ಯ, ಅಹಿಂಸೆ ಇವು ಶಾರೀರಿಕ ತಪಸ್ಸುಗಳು. ಜನರ ಮನಸ್ಸಿಗೆ ಪೀಡೆಯುಂಟಾಗದಂತೆ ಮಾತಾಡುವುದು, ಸತ್ಯಮಾತಾಡುವುದು, ಪ್ರಿಯವಾದ ಮತ್ತು ಹಿತವಾದ ಮಾತುಗಳನ್ನಾಡುವುದು, ವೇದಾಧ್ಯಯನಮಾಡುವುದು ಇವು ವಾಙ್ಮಯ ತಪಸ್ಸುಗಳು. ಮನಃಪ್ರಸನ್ನತೆ, ಸೌಮ್ಯತ್ವ, ಮೌನ, ಮನೋನಿಗ್ರಹ, ಭಾವಸಂಶುದ್ಧಿ ಇವು ಮಾನಸಿಕ ತಪಸ್ಸುಗಳು. ಈ ಮೂರು ತರಹದ ತಪಸ್ಸುಗಳನ್ನು ಅಂದರೆ ಶಾರೀರಿಕ, ವಾಙ್ಮಯ ಮತ್ತು ಮಾನಸಿಕ ತಪಸ್ಸುಗಳನ್ನು ಮಾಡುವವರಲ್ಲಿಯೂ ತ್ರಿಗುಣಭೇದವಿದೆ. ಹೇಗೆಂದರೆ ಶ್ರದ್ಧೆಯಿಂದ ಯುಕ್ತನಾಗಿ ಈ ಮೂರುತರಹದ ತಪಸ್ಸುಗಳನ್ನು ಫಲಾಪೇಕ್ಷೆಯಿಲ್ಲದೆ ಮಾಡುವವನು ಸಾತ್ವಿಕನು. ಸತ್ಕಾರಮಾನಪೂಜಾರ್ಥವಾಗಿಯೂ ದಂಭಕ್ಕೋಸ್ಕರವೂ ಇವುಗಳನ್ನು ಮಾಡುವವನು ರಾಜಸನು. ದುರಾಗ್ರಹದಿಂದಲೂ ಪರರಿಗೆ ಉಪದ್ರವಕೊಡುವ ಉದ್ದೇಶದಿಂದಲೂ, ಪರರನ್ನು ಕೊಲ್ಲುವುದಕ್ಕೋಸ್ಕರವೂ ತಪಸ್ಸುಗಳನ್ನು ಮಾಡುವವನು ತಾಮಸನು.

ದಾನಗಳಲ್ಲಿಯೂ ಮೂರುವಿಧ. ಪ್ರತ್ಯುಪಕಾರವನ್ನು ಬಯಸದೆ, ಕೇವಲ ದಾನಮಾಡಬೇಕೆಂಬುದೊಂದೇ ಉದ್ದೇಶದಿಂದ, ದೇಶ-ಕಾಲ-ಪಾತ್ರಗಳನ್ನು ಪೂರ್ಣವಾಗಿ ವಿಚಾರಮಾಡಿ ಮಾಡುವ ದಾನವು ಸಾತ್ವಿಕವು. ಪ್ರತ್ಯುಪಕಾರವನ್ನು ಅಪೇಕ್ಷಿಸಿ, ಫಲಾಪೇಕ್ಷೆಯಿಂದ, ಮನಸ್ಸಿಗೆ ಹಳಹಳಿಮಾಡಿಕೊಂಡು ಮಾಡುವ ದಾನವು ರಾಜಸವು. ದೇಶ-ಕಾಲ-ಪಾತ್ರಗಳನ್ನು ವಿಚಾರಮಾಡದೆ, ಮಾನಮರ್ಯಾದೆಗಳನ್ನು ಮಾಡದೆ, ಕೇವಲ ತಿರಸ್ಕಾರಬುದ್ಧಿಯಿಂದ ಮಾಡುವ ದಾನವು ತಾಮಸವು.

ಯಜ್ಞದಾನ ತಪಸ್ಸು ಮುಂತಾದವುಗಳು ಸಾತ್ವಿಕ ಮುಂತಾದ ಸ್ವರೂಪಗಳನ್ನು ತಾಳುವುದಕ್ಕೆ ಮುಖ್ಯವಾದ ಅಸಾಧಾರಣ ಧರ್ಮಗಳನ್ನು ಮೇಲ್ಕಾಣಿಸಿದಂತೆ ವಿವರಿಸಿದಬಳಿಕ ಇನ್ನು ಮುಂದೆ ಅವುಗಳ ಸಾಧಾರಣ ಧರ್ಮಗಳನ್ನು ಹೇಳುತ್ತಾರೆ. ಆದರೆ ಅದಕ್ಕೆ ಮುಂಚೆ, ಹಿಂದಿನವರ ಉದಾಹರಣೆಯೊಂದನ್ನು ಕೊಡುತ್ತಾರೆ. ಹೇಗೆಂದರೆ ಬ್ರಹ್ಮನಿಗೆ ಓಂ, ತತ್, ಮತ್ತು ಸತ್ ಎಂದು ಮೂರು ಹೆಸರುಗಳು. ಸರ್ವಪ್ರಪಂಚವು ಪರಮಾತ್ಮನಲ್ಲಿ ಸೇರಿರುವುದರಿಂದ ಅಥವಾ ಸರ್ವ ಪ್ರಪಂಚದಲ್ಲಿಯೂ ಪರಮಾತ್ಮನು ವ್ಯಾಪ್ತವಾಗಿರುವುದರಿಂದ ಆತನಿಗೆ ಓಂ ಎಂದು ಹೆಸರು. ಆತನು ಗುಣಪೂರ್ಣನಾಗಿರುವುದರಿಂದಲೂ ಆತನು ವೇದಗಳಿಂದ

ತಿಳಿಯಲ್ಪಡಲಿಕ್ಕೆ ಅರ್ಹನಾಗಿರುವುದರಿಂದ ಆತನು ಅಪ್ರತ್ಯಕ್ಷನಾಗಿರುವುದರಿಂದಲೂ ಆತನಿಗೆ ’ತತ್’ ಎಂದು ಹೆಸರು. ಆತನು ನಿರ್ದೋಷನೂ ಸದ್ಗುಣಪರಿಪೂರ್ಣನೂ ಆದಕಾರಣ ಆತನಿಗೆ ’ಸತ್’ ಎಂದು ಹೆಸರು. ಈ ಮೂರು ಸಂಸ್ಕೃತಶಬ್ದಗಳಿಗೆ ಈ ಅರ್ಥಗಳು ಇರುತ್ತವೆ. ಆ ಅರ್ಥಗಳು ಆ ಶಬ್ದಗಳಿಗೆ ಹೇಗೆ ಉಂಟಾದವೆಂಬುದನ್ನು ಇಲ್ಲಿ ಹೇಳುವುದು ಬೇಡ. ಇರಲಿ. ಹೀಗೆ ಮೂರು ನಾಮಗಳುಳ್ಳ ಪರಮಾತ್ಮನಿಂದ ಸೃಷ್ಟಿ ಕಾಲದಲ್ಲಿ, ಬ್ರಾಹ್ಮಣರೂ ವೇದಗಳೂ ಯಜ್ಞಗಳೂ ಹುಟ್ಟಿವೆ. ಈಬಗೆಯಾಗಿ ಓಂ ಎಂಬುದು ಪರಮಾತ್ಮನ ಒಂದು ನಾಮವಾದುದರಿಂದ, ಮೋಕ್ಷಕಾಂಕ್ಷಿಗಳಾದರೂ ಓಂ ಎಂದು ಉಚ್ಚರಿಸಿ ಶಾಸ್ತ್ರಗಳಲ್ಲಿ ಹೇಳಲ್ಪಟ್ಟ ಯಜ್ಞದಾನ ತಪಸ್ಸು ಮುಂತಾದ ಕರ್ಮಗಳನ್ನು ಮಾಡತಕ್ಕದ್ದು. ಹೀಗೆ ಓಂಕಾರಾರ್ಥವನ್ನು ತಿಳಿದು, ಉಚ್ಚರಿಸಿ, ಶಾಸ್ತ್ರವಿಧಿಪೂರ್ವಕವಾಗಿ ಮಾಡುವ ಯಜ್ಞದಾನಾದಿಗಳೇ ಸಾತ್ವಿಕಗಳು, ಪರಬ್ರಹ್ಮನ ಮತ್ತೊಂದು ನಾಮವಾದ, ಆ ’ತತ್’ ಎಂಬುದನ್ನು ಅನುಸಂಧಾನಮಾಡಬೇಕು. ತತ್ ಅಂದರೆ ’ಆ’ ಅಂದರೆ ಆ ಅಪ್ರತ್ಯಕ್ಷನಾದ ಪರಬ್ರಹ್ಮನ ಪ್ರೀತಿಗೋಸ್ಕರ ನಾನು ಯಜ್ಞದಾನಾದಿಗಳನ್ನು ಮಾಡುತ್ತೇನೆಂದು ಅನುಸಂಧಾನಮಾಡಬೇಕು. ಅದೇ ಮೇರೆಗೆ ’ತತ್’ ಅಂದರೆ ಆ ಫಲವನ್ನು ಅಂದರೆ ಅಪ್ರತ್ಯಕ್ಷವಾಗಿರುವ ಆ ಸ್ವರ್ಗಾದಿಫಲಗಳನ್ನು ಅಭಿಸಂಧಾನಮಾಡಬಾರದು, ಎಂದರೆ ಬಯಸಬಾರದು. ಈಬಗೆಯಾಗಿ ಯಜ್ಞದಾನಾದಿಗಳನ್ನು ಮಾಡತಕ್ಕದ್ದು. ಅದೇ ಮೇರೆಗೆ ’ಸತ್’ ಎಂದರೆ ಸದ್ಗುಣಪರಿಪೂರ್ಣನಾದ ವಿಷ್ಣುವನ್ನೂ ನೆನಿಸಿ ಕರ್ಮಮಾಡಬೇಕು. ಸದ್ಗುಣಪೂರ್ಣನಾದ ವಿಷ್ಣುವಿನ ಜ್ಞಾನವು ಕರ್ಮಾಚರಣವು ಸಾತ್ವಿಕವಾಗುವುದಕ್ಕೆ ಅವಶ್ಯವಾದುದು. ಈ ಸತ್ ಎಂಬ ಪದದ ಅರ್ಥಗಳು ಅನೇಕವಾಗಿವೆ. (೧) ಹುಟ್ಟುವಿಕೆ (೨) ಸಾಧುತ್ವ (೩) ಸತ್‌ಕರ್ಮ (೪) ಯಜ್ಞ ದಾನ ತಪಸ್ಸುಗಳಲ್ಲಿ ನಿಷ್ಠೆಯು ಅಂದರೆ ಭಗವಂತನು ಇವುಗಳಿಗೆ ಫಲವನ್ನು ಕೊಡುತ್ತಾನೆಂಬ ಬುದ್ಧಿಯು ಸತ್ ಎನ್ನಿಸಲ್ಪಡುತ್ತದೆ. (೫) ಇದಲ್ಲದೆ ಪರಮಾತ್ಮನ ಪ್ರೀತ್ಯರ್ಥವಾಗಿ ಮಾಡಲ್ಪಡುವ ಕರ್ಮಕ್ಕೂ ’ಸತ್’ ಎಂದೆನ್ನುತ್ತಾರೆ. ಹೀಗೆ ’ಸತ್’ ಶಬ್ದಕ್ಕೆ ಅನೇಕ ಚಲೋ ಅರ್ಥಗಳಿರುತ್ತವೆ. ಆದಕಾರಣ, ಪ್ರತಿಯೊಂದು ಕರ್ಮಮಾಡುವಾಗ ’ಸತ್’ ಎಂಬುದನ್ನು ಮನಸ್ಸಿನಲ್ಲಿ ತಂದು, ಉಚ್ಚರಿಸಿ ಕರ್ಮಮಾಡಬೇಕು. ಈ ಪ್ರಕಾರವಾಗಿ ಮಾಡುವುದರಿಂದಲೇ ಆ ಯಜ್ಞ ದಾನಾದಿ ಕರ್ಮಗಳಿಗೆ ಸಾತ್ವಿಕತ್ವವು ಬರುತ್ತದೆ. ಅದೇ, ಈ ಧರ್ಮಗಳಿಗೆ ವಿರುದ್ಧವಾಗಿರುವ ಧರ್ಮವು ಯಾವುದೆಂದರೆ ಅಶ್ರದ್ಧೆಯಿಂದ ಎಂದರೆ ಭಗವಂತನಲ್ಲಿ ಶ್ರದ್ದೆಯಿಲ್ಲದೆ ಮಾಡಲ್ಪಟ್ಟ ಯಜ್ಞವು ಕೊಡಲ್ಪಟ್ಟ ದಾನವು ಮತ್ತು ಆಚರಿಸಲ್ಪಟ್ಟ ತಪಸ್ಸು ಇವುಗಳು ’ಅಸತ್’ ಎಂದೆನ್ನಿಸಿಕೊಳ್ಳಲ್ಪಡುತ್ತವೆ. ಇಂಥ ಅಸತ್ಕರ್ಮಗಳಿಂದ ಐಹಿಕ

ಫಲವೂ ಇಲ್ಲ, ಆಮುಷ್ಮಿಕ ಫಲವೂ ಇಲ್ಲ. ಈಬಗೆಯಾಗಿ ಪರಮಾತ್ಮನಲ್ಲಿ ಶ್ರದ್ಧೆಯಿಡುವುದೇ ಅತ್ಯಂತ ಮುಖ್ಯವಾದದ್ದು.

೨೨ನೆಯ ಪ್ರಕರಣ

( ೧೮ನೆಯ ಅಧ್ಯಾಯದ ತಾತ್ಪರ್ಯ ಪ್ರಾರಂಭ )

# ಸರ್ವಸಾಧನ ಸಂಗ್ರಹ

ಗೀತೆಯು ಮುಖ್ಯವಾಗಿ ವಿವೇಚಿಸತಕ್ಕ ವಿಷಯಗಳೆಲ್ಲವೂ ಹಿಂದಿನ ಅಧ್ಯಾಯಗಳಲ್ಲಿ ಮುಗಿದಂತಾದವು. ಕೊನೆಯ ೧೮ ನೆಯ ಅಧ್ಯಾಯದಲ್ಲಿ ಹಿಂದೆ ಹೇಳಿದ ಯಾವತ್ತು ಜ್ಞಾನಸಾಧನಗಳು ಸಂಕ್ಷೇಪವಾಗಿ ಕ್ರೋಢೀಕರಿಸಿ ಹೇಳಲ್ಪಟ್ಟಿವೆ. ಇದಲ್ಲದೆ ಹಿಂದಕ್ಕೆ ಹೇಳದೆ ಉಳಿದ ಕೆಲವು ತ್ರಿಗುಣಗಳೂ ಹೇಳಲ್ಪಟ್ಟಿವೆ. ಮತ್ತು ಕೊನೆಗೆ ಉಪಸಂಹಾರವು ಮಾಡಲ್ಪಟ್ಟಿರುವುದು.

ಹಿಂದಕ್ಕೆ ಹೊರಳಿನೋಡಿ ಹಿಂದಿನ ಪ್ರಕರಣಗಳಲ್ಲಿ ಹೇಳಿದ ವಿಷಯಗಳ ಸಿಂಹಾವಲೋಕನವನ್ನು ಮಾಡುವ. ಆ ಕೌರವರನ್ನು ಕೊಲ್ಲುವ ಈ ಯುದ್ಧವನ್ನು ಏಕೆ ಮಾಡಬೇಕೆಂದು ಅರ್ಜುನನ ಶಂಕೆ. ಅವರು ಸಾಯುವರು ಎಂಬುದೇ ಸುಳ್ಳು, ಅವರ ಜೀವಗಳು ಎಂದೂ ಸಾಯುವುದೇ ಇಲ್ಲ, ದೇಹಗಳು ಎಂದಾದರೊಮ್ಮೆ ಸಾಯತಕ್ಕವೇ. ಆದಕಾರಣ, ನೀನು ಯೋಗ್ಯ ರೀತಿಯಿಂದ ಯುದ್ಧ ಮಾಡಿದರೆ ಅವರನ್ನು ಕೊಂದುದಕ್ಕೆ ನೀನು ಹೊಣೆಗಾರನಾಗುವುದಿಲ್ಲವೆಂದು ಶ್ರೀಕೃಷ್ಣನ ಉತ್ತರ. ಆ ಯೋಗ್ಯರೀತಿ ಯಾವುದು ಎಂದರೆ ಜೀವ ಜಗತ್ತು ಮತ್ತು ಪರಮಾತ್ಮ ಇವರೊಳಗಿರುವ ಸಂಬಂಧವನ್ನು ಯಥಾರ್ಥವಾಗಿ, ಪ್ರತ್ಯಕ್ಷವಾಗಿ ತಿಳಿದುಕೊಂಡು ಯುದ್ಧ ಮಾಡುವುದು. ಇಂಥ ಪ್ರತ್ಯಕ್ಷಜ್ಞಾನಕ್ಕೆ ಅಪರೋಕ್ಷ ಜ್ಞಾನವೆನ್ನಬೇಕು. ಮತ್ತು ಇಂಥ ಜ್ಞಾನವುಳ್ಳ ಸ್ಥಿತಿಗೆ ಜೀವನ್ಮುಕ್ತಾವಸ್ಥೆಯೆಂದು ಹೇಳಬಹುದು. ಒಟ್ಟಿಗೆ, ಜೀವನ್ಮುಕ್ತನಾಗಿ ನಿನ್ನ ಸ್ವಧರ್ಮವಾದ ಯುದ್ಧವನ್ನು ಮಾಡಿದರೆ ಪಾಪವಿಲ್ಲವೆಂದು ಹೇಳಿದಂತಾಯಿತು. ಇಂಥ ಜ್ಞಾನಕ್ಕೆ ಫಲ ಮೋಕ್ಷ, ಜೀವನು ಈ ಮೋಕ್ಷವನ್ನು ಪಡೆಯಬೇಕೆಂದು ದೇವರ ಇಚ್ಛೆ, ಅದಕ್ಕೆ ಮೇಲೆ ಹೇಳಿದಂತೆ ಅಪರೋಕ್ಷಜ್ಞಾನವೇ ಸಾಧನ. ಆ ಸಾಧನವನ್ನು ಸಾಧಿಸುವುದಕ್ಕಾಗಿಯೇ ಜೀವನಿಗೆ ಸಂಸಾರ ಬಂಧನ. ಮೋಕ್ಷದ ದೃಷ್ಟಿಯಿಂದ ಇದು ಬಂಧನವೆನಿಸಿದರೂ ಸಾಧನದ ದೃಷ್ಟಿಯಿಂದ ಇದು ಬಂಧನವಲ್ಲ, ಸಾಧನಕ್ಷೇತ್ರ, ಇದಕ್ಕೆ ಲಗ್ನ ಬಂಧನವೆಂದು ಕರೆಯುವುದು ಒಳ್ಳೆಯದು. ಜೀವನಿಗೂ ಪ್ರಕೃತಿಗೂ ಲಗ್ನ ಮಾಡಿಕೊಟ್ಟು ಅವರಿಬ್ಬರು ಸಂಸಾರವನ್ನು ಮಾಡಬೇಕೆಂದು ಇಚ್ಛೆ, ಈ ಸಂಸಾರಮಾಡುವ ಉದ್ದೇಶವು ಕೇವಲ ಕಾಮಭೋಗವಲ್ಲ, ಪರಮಾತ್ಮನ ಜ್ಞಾನ, ಮತ್ತು ತಾರಾ ತನಗೆ ಮೋಕ್ಷ ಅಥವಾ ಪರಮಾತ್ಮ ಪ್ರಾಪ್ತಿ

ಮತ್ತು ಸಂಸಾರಪ್ರವಾಹವನ್ನು ಮುಂದೆ ಸಾಗಿಸುವುದು. ಇರಲಿ. ಜ್ಞಾನಗಳಿಸುವುದಕ್ಕೆ ಮುಖ್ಯವಾದ ಸಾಧನಗಳು ಎರಡು (೧) ಸಂನ್ಯಾಸ (೨) ಯೋಗ ಇವೆರಡರಲ್ಲಿ ಈ ೧೮ ನೆಯ ಅಧ್ಯಾಯದಲ್ಲಿ ಮುಂಚೆ ಸಂನ್ಯಾಸದ ಸ್ಪಷ್ಟೀಕರಣವನ್ನು ಮಾಡಿರುವರು. ಮುಂದೆ ಉಪಸಂಹಾರದಲ್ಲಿ ಯೋಗದ ಸ್ಪಷ್ಟೀಕರಣವನ್ನು ಮಾಡಿರುವರು.

೨-೪೫ ನೆಯ ಶ್ಲೋಕದಲ್ಲಿ ಯೋಗವನ್ನು ಅಂದರೆ ಜ್ಞಾನೋಪಾಯವನ್ನು ಹೇಳಲಿಕ್ಕೆ ಪ್ರಾರಂಭಿಸಿದಾಗ ಈ ಜ್ಞಾನಸಾಧನಗಳು ಹೀಗೆಂದು ಸಂಕ್ಷೇಪವಾಗಿ ಹೇಳಲ್ಪಟ್ಟಿವೆ. ಅವು ಯಾವುವೆಂದರೆ (೧) ತ್ರಿಗುಣಾತೀತನಾಗುವುದು (೨) ನಿರ್ದ್ವಂದ್ವನಾಗುವುದು (೩) ನಿತ್ಯಸತ್ವಸ್ಥನಾಗುವುದು ಅಂದರೆ ನಿತ್ಯದಲ್ಲಿ ಪರಮಾತ್ಮನಿಷ್ಠನಾಗುವುದು (೪) ತನ್ನ ಯೋಗಕ್ಷೇಮಗಳ ಚಿಂತೆಯನ್ನು ಬಿಡುವುದು (೫) ಆತ್ಮವಂತನಾಗುವುದು ಅಂದರೆ ಪರಮಾತ್ಮನೇ ತನ್ನ ಸ್ವಾಮಿಯೆಂದು ತಿಳಿಯುವುದು. ಇವೈದರಲ್ಲಿ (೧) ಗುಣಾತೀತನಾಗುವುದು (೨) ನಿರ್ದ್ವಂದ್ವನಾಗುವುದು ಮತ್ತು (೩) ಯೋಗಕ್ಷೇಮಗಳನ್ನು ಬಿಡುವುದು ಇವು ಮೂರು ಸಂನ್ಯಾಸಕ್ಕೆ ಸಂಬಂಧಿಸಿರುತ್ತವೆ. (೧) ನಿತ್ಯಸತ್ವಸ್ಥನಾಗುವುದು (೨) ಮತ್ತು ಆತ್ಮವಂತನಾಗುವುದು ಇವೆರಡು ಯೋಗಕ್ಕೆ ಸಂಬಂಧಿಸಿರುತ್ತವೆ. ಮುಂಚೆ ಇಲ್ಲಿ ಸಂನ್ಯಾಸದ ಸ್ವರೂಪವು ಕ್ರೋಡೀಕರಿಸಿ ಹೇಳಲ್ಪಟ್ಟಿದೆ. ಸಂನ್ಯಾಸವೆಂದರೆ ಬಿಡುವುದು. ಇದರಲ್ಲಿ ಎರಡು ವಿಧ (೧) ಕಾಮ್ಯಕರ್ಮಗಳನ್ನು ಬಿಡುವುದು (೨) ಸರ್ವಕರ್ಮಗಳ ಫಲವನ್ನು ಬಿಡುವುದು. ಕಾವ್ಯಕರ್ಮಗಳನ್ನು ಬಿಡುವುದರಲ್ಲಿಯೂ ಎರಡು ವಿಧ (೧) ಐಚ್ಛಿಕ ಕಾಮ್ಯಕರ್ಮಗಳನ್ನು ಫಲಾಪೇಕ್ಷೆಯಿಲ್ಲದೆ ಮಾಡುವುದು. ಉದಾ- ಜ್ಯೋತಿಷ್ಟೋಮಾದಿ ಯಜ್ಞಗಳನ್ನು ಫಲಾಪೇಕ್ಷೆಯನ್ನು ಇಟ್ಟುಕೊಂಡೂ ಮಾಡಲಿಕ್ಕೆ ಬರುತ್ತದೆ. ಬಿಟ್ಟೂ ಮಾಡಲಿಕ್ಕೆ ಬರುತ್ತದೆ. ಇಂಥ ಐಚ್ಛಿಕ ಕರ್ಮಗಳಲ್ಲಿ ಫಲಾಪೇಕ್ಷೆಯನ್ನು ಬಿಟ್ಟು ಆ ಕಾಮ್ಯಕರ್ಮಗಳನ್ನು ಮಾಡುವುದಕ್ಕೆ ಸಂನ್ಯಾಸವೆಂಬ ವಿಶಿಷ್ಟವಾದ ಹೆಸರು ಇರುತ್ತದೆ. (೨) ಅದೇ ಮೇರೆಗೆ ಕೇವಲ ಕಾಮ್ಯವೇ ಆಗಿರುವ ಕರ್ಮಗಳನ್ನು ಅಪೂಟವಾಗಿ ಬಿಟ್ಟೇಬಿಡುವುದಕ್ಕೂ ಸಂನ್ಯಾಸವೆಂದು ಹೆಸರು. ಇನ್ನು ಕಾಮ್ಯವೇ ಇರಲಿ, ಅಕಾಮ್ಯವೇ ಇರಲಿ, ನಿಷಿದ್ಧವೇ ಇರಲಿ- ಯಾವುದೇ ಕರ್ಮವಿರಲಿ ಅದರೊಳಗಿನ ಫಲವನ್ನು ತ್ಯಾಗಮಾಡುವುದಕ್ಕೆ ತ್ಯಾಗವೆಂಬ ವಿಶಿಷ್ಟವಾದ ಹೆಸರು ಇರುತ್ತದೆ. ಇದರಿಂದ ಗೊತ್ತಾಗುವುದೇನೆಂದರೆ ಸಂನ್ಯಾಸವೆಂದರೂ ಒಂದೇ ತ್ಯಾಗವೆಂದರೂ ಒಂದೇ, ಪರಿಭಾಷೆಯಲ್ಲಿ ಮಾತ್ರ ತುಸು ಭೇದ. ಕೆಲವು ತರಹದ ಬಿಡೋಣಕ್ಕೆ ಸಂನ್ಯಾಸ, ಕೆಲವು ತರಹದ ಬಿಡೋಣಕ್ಕೆ ತ್ಯಾಗವೆಂದು ಸಂಸ್ಕೃತದಲ್ಲಿ ಹೆಸರುಗಳು. ವಸ್ತುತಃ ಅವುಗಳಲ್ಲಿ ವಿರೋಧವಿಲ್ಲ. ಕೆಲವು ಜ್ಞಾನಿಗಳು ಕರ್ಮಮಾಡಬೇಕೆಂದು ಹೇಳುತ್ತಾರೆ ಮತ್ತೆ ಕೆಲವು ಜ್ಞಾನಿಗಳು ಕರ್ಮಬಿಡಬೇಕೆಂದು ಹೇಳುತ್ತಾರೆ,

ಇಬ್ಬರ ಉದ್ದೇಶವೂ ಒಂದೇ, ಕರ್ಮಮಾಡಬೇಕೆಂದು ಹೇಳುವವರ ಅರ್ಥವು ಯಜ್ಞ, ದಾನ ಮತ್ತು ತಪ ಇವೇ ಮುಂತಾದ ಕರ್ಮಗಳನ್ನು ಯಾರೂ ಬಿಡಕೂಡದು ಎಂದಿರುತ್ತದೆ. ಸಿಕ್ಕ ಸಿಕ್ಕ ಕರ್ಮಗಳನ್ನು ಸಿಕ್ಕ ಸಿಕ್ಕ ರೀತಿಯಲ್ಲಿ ಮಾಡಬೇಕೆಂದು ಅವರ ಉದ್ದೇಶವಿರುವುದಿಲ್ಲ. ಇನ್ನು ಕರ್ಮಗಳನ್ನು ಬಿಡಬೇಕೆಂದು ಹೇಳುವವರ ಉದ್ದೇಶವು ಯಾವತ್ತು ಕರ್ಮಗಳನ್ನು ಸ್ವರೂಪತಃ ಬಿಟ್ಟೇಬಿಡಬೇಕೆಂದಿರುವುದಿಲ್ಲ. ಕಾಮ್ಯ ಕರ್ಮಗಳನ್ನು ಮಾತ್ರ ಸ್ವರೂಪತಃ ಬಿಟ್ಟುಕೊಡಬೇಕೆಂಬುದೇ ಅವರ ಮುಖ್ಯ ಉದ್ದೇಶ. ಸಾರಾಂಶ, ಅವು ಆಯಾ ಸಂದರ್ಭಾನುಸಾರವಾಗಿ ಅವರು ಹೇಳಿದ ಮಾತುಗಳೇ ಹೊರತು, ನಿಜವಾಗಿ ಅವರಿಬ್ಬರ ತಾತ್ಪರ್ಯವು ಒಂದೇ ಇರುತ್ತದೆ. ಈ ವಿಷಯದಲ್ಲಿ ಕಟ್ಟ ಕಡೆಯ ಮತ್ತು ನಿಶ್ಚಿತವಾದ ಸಿದ್ಧಾಂತವು ಯಾವುದೆಂದರೆ ಯಜ್ಞ, ದಾನ ಮತ್ತು ತಪ ಇವೇ ಮುಂತಾದ ಕರ್ಮಗಳನ್ನು ಪ್ರತಿಯೊಬ್ಬನೂ ಮಾಡಲೇಬೇಕು, ಬಿಡಕೂಡದು. ಅವು ಮನಸ್ಸನ್ನು ಪಾವನಗೊಳಿಸುವವು. ಮೋಹದಿಂದ ಅವುಗಳನ್ನು ಬಿಟ್ಟು ಕೊಡುವುದು ನಿಜವಾದ ತ್ಯಾಗವಲ್ಲ, ಅದು ತಾಮಸ ತ್ಯಾಗ. ಹಾಗೆಯೇ ಅವುಗಳನ್ನು ಪೂರಾ ತ್ಯಾಗಮಾಡದಿದ್ದರೂ, ದುಃಖದಿಂದಲೂ, ಅವುಗಳನ್ನು ಮಾಡುವುದರಿಂದ ತಮ್ಮ ಶರೀರಕ್ಕೆ ಕ್ಲೇಶವಾಗುತ್ತದೆಂಬ ಭಯದಿಂದಲೂ ಅವುಗಳನ್ನು ಮಾಡುವುದನ್ನು ಬಿಡುವುದು ರಾಜಸತ್ಯಾಗವು. ಆದರೆ ಕೇವಲ ಕರ್ತವ್ಯವೆಂದು ತಿಳಿದು, ಅವುಗಳನ್ನು ಸಂಗವನ್ನೂ ಫಲಸ್ನೇಹವನ್ನೂ ಬಿಟ್ಟು ಮಾಡುವುದು ಸಾತ್ವಿಕ ತ್ಯಾಗವು ಅಂಥವನೇ ನಿಜವಾದ ತ್ಯಾಗಿಯು. ಅಂಥ ತ್ಯಾಗಿಯು ಕಾಯಕ್ಲೇಶ ಭಯದಿಂದ ಕರ್ತವ್ಯಕರ್ಮವನ್ನು ಅದು ತನ್ನ ಮನಸ್ಸಿಗೆ ಬಾರದ್ದೆಂದು ತಿಳಿದು ಮಾಡುವುದನ್ನು ಬಿಡುವುದಿಲ್ಲ. ಅಥವಾ ಅದು ತನ್ನ ಮನಸ್ಸಿಗೆ ಬರುತ್ತದೆಂದು ತಿಳಿದು ಅದರಲ್ಲಿಯೇ ಆಸಕ್ತನಾಗುವುದಿಲ್ಲ. ಆತನು ಸದಾ ಪರಮಾತ್ಮನಲ್ಲಿ ಆಸಕ್ತನಾಗಿರುತ್ತಾನೆ. ಆತನ ಮನದಲ್ಲಿ ಸಂದೇಹಗಳಾವವೂ ಇರುವುದಿಲ್ಲ. ಒಟ್ಟಿಗೆ ಹೇಳುವುದೇನೆಂದರೆ ಕರ್ಮಗಳನ್ನು ಅಪೂಟವಾಗಿ ಬಿಡುವುದು ಎಂದಿಗೂ ಶಕ್ಯವೇ ಇಲ್ಲ. ಕರ್ಮಫಲವನ್ನು ತ್ಯಾಗಮಾಡುವವನೇ ನಿಜವಾದ ತ್ಯಾಗಿಯು. ಫಲತ್ಯಾಗಮಾಡದಿದ್ದವರಿಗೆ ಇಷ್ಟ, ಅನಿಷ್ಟ ಮತ್ತು ಮಿಶ್ರ ಹೀಗೆ ಮೂರು ವಿಧ ಫಲಗಳು ದೊರಕುತ್ತವೆ. ಆದರೆ ನಿಜವಾದ ತ್ಯಾಗಿಗೆ ಇವು ಮೂರುಗಳಲ್ಲಿ ಯಾವುದೂ ದೊರಕುವುದಿಲ್ಲ. ಆತನಿಗೆ ದೊರಕುವ ಫಲವೆಂದರೆ ಮೋಕ್ಷವೊಂದೇ.

ತ್ಯಾಗವೆಂದರೆ ಫಲತ್ಯಾಗವಷ್ಟೇ ಅಲ್ಲ, ಕರ್ತೃತ್ವಾಭಿಮಾನ ತ್ಯಾಗವೂ ತ್ಯಾಗವೇ. ಮನುಷ್ಯನು ಆ ಕರ್ತೃತ್ವಾಭಿಮಾನವನ್ನೂ ತ್ಯಾಗಮಾಡಬೇಕು. ಏಕೆಂದರೆ ಒಂದು ಕರ್ಮಮಾಡುವುದಕ್ಕೆ ಒಟ್ಟಿಗೆ ಐದು ಕಾರಣಗಳು ಕೂಡಿರಬೇಕಾಗುತ್ತದೆ. ಅವು ಯಾವುವೆಂದರೆ

(೧) ಅಧಿಷ್ಠಾನ ಅಂದರೆ, ಶರೀರ, ಭೂಮಿ ಮುಂತಾದವುಗಳು (೨) ಕರ್ತೃ (೩) ಕರಣ ಅಂದರೆ ನಾನಾವಿಧವಾದ ಉಪಕರಣಗಳು. (೪) ಅನೇಕ ವಿಧ ವ್ಯಾಪಾರಗಳು. ಅಂದರೆ ಕೈಕಾಲುಗಳ ಚಲನ ಧ್ಯಾನರೂಪವಾದ ಮಾನಸವ್ಯಾಪಾರ ಇವೇ ಮುಂತಾದ ಕ್ರಿಯೆಗಳು (೫) ಮತ್ತು ದೈವ ಅಂದರೆ ವಿಷ್ಣುವು ಇದು ಕಾರಣಗಳು ಕೂಡಿರದಿದ್ದರೆ, ಯಾವ ಕ್ರಿಯೆಯೂ ಹುಟ್ಟಲಾರದು. ಹೀಗೆ ಕರ್ತನು ಅಂದರೆ ಜೀವನು ಇದು ಕಾರಣಗಳಲ್ಲಿ ಒಬ್ಬನು. ಹೀಗಿದ್ದ ಬಳಿಕ ತಾನೊಬ್ಬನೇ ಕರ್ಮಕ್ಕೆ ಕಾರಣನೆಂದು ತಿಳಿಯುವುದು ಸಾಹಸದ ಮಾತಲ್ಲವೆ? ಆದ ಕಾರಣ, ಮನುಷ್ಯನು ತಾನೊಬ್ಬನೇ ಕರ್ತೃವು ಎಂಬ ಅಭಿಮಾನವನ್ನು ತಾಳಬಾರದು. ಇದು ಕಾರಣಗಳನ್ನು ಸಂಗ್ರಹಿಸಿ ಅವುಗಳನ್ನು (೧) ಕರಣ (೨) ಕರ್ಮ (೩) ಕರ್ತ ಎಂಬುದಾಗಿ ಮೂರೇ ವರ್ಗಗಳನ್ನು ಮಾಡಿ ಸೇರಿಸಬಹುದು. ಇವು ಕರ್ಮಕಾರಣಗಳಾದವು. ಇನ್ನು ಕರ್ಮಕ್ಕೆ ಚೋದನಕೊಡುವ ವಸ್ತುಗಳು ಯಾವುವೆಂದರೆ (೧) ಜ್ಞಾನ (೨) ಜ್ಞೇಯ (೩) ಮತ್ತು ಪರಿಜ್ಞಾತಾ ಅಂದರೆ ತಿಳಿಯುವವನು, ಸಾರಾಂಶ, ತಿಳಿಯುವವನು, ತಿಳಿಯತಕ್ಕ ವಸ್ತುವು ಮತ್ತು ತಿಳಿಯತಕ್ಕ ಜ್ಞಾನವು ಇವು ಮೂರು ಆವಶ್ಯಕವಸ್ತುಗಳು. ಈ ತ್ರಿಪುಟಿಯಿಲ್ಲದೆ ಯಾವ ಕರ್ಮಮಾಡುವುದಕ್ಕೂ ಮನುಷ್ಯನಿಗೆ ಇಚ್ಛೆ ಹುಟ್ಟಲಾರದು. ಐದು ಕರ್ಮಕಾರಣಗಳನ್ನು ಮೂರರಲ್ಲಿ ಸೇರಿಸುವ ಬಗೆ ಹೇಗೆಂದರೆ (೧) ಅಧಿಷ್ಠಾನ ಮತ್ತು ಕರಣ ಇವರಡನ್ನೂ ಕರಣದಲ್ಲಿಯೇ ಸೇರಿಸಲಿಕ್ಕೆ ಬರುತ್ತದೆ. ವಿವಿಧಚೇಷ್ಟೆ ಅಥವಾ ವ್ಯಾಪಾರಗಳಿಗೆ ಕರ್ಮವೆನ್ನಬಹುದು. ಮತ್ತು ಕರ್ತ ಮತ್ತು ದೈವ ಇರಡನ್ನೂ ಕರ್ತನಲ್ಲಿ ಸೇರಿಸಬಹುದು. ಏಕೆಂದರೆ ಜೀವನೂ ಕರ್ತನೇ ವಿಷ್ಣುವೂ ಕರ್ತನೇ, ಇರಲಿ. ಕೊನೆಗೆ ಹೇಳಬೇಕಾದುದೇನೆಂದರೆ ಯಾವನು ಈ ಬಗೆಯಾಗಿ ಕರ್ತೃತ್ವಾಭಿಮಾನವನ್ನು ಬಿಟ್ಟು ಕರ್ಮಮಾಡುತ್ತಾನೋ ಮತ್ತು ಯಾವನ ಬುದ್ಧಿಯು ಫಲಾಪೇಕ್ಷೆಯಿಂದ ದೂಷಿತವಾಗಿರುವುದಿಲ್ಲವೋ ಅಂಥವನು ಇವೆಲ್ಲ ಲೋಕಗಳನ್ನು ಕೊಂದರೂ ಕೂಡ ಆ ಕೊಂದದೋಷವು ಆತನಿಗೆ ಹತ್ತುವುದಿಲ್ಲ.

# ೨೩ನೆಯ ಪ್ರಕರಣ

( ೧೮ನೆಯ ಅಧ್ಯಾಯದ ತಾತ್ಪರ್ಯ ಮುಂದೆ ಸಾಗಿದುದು )

ಹಿಂದಕ್ಕೆ ಗೀತೆಯ ೧೭ನೆಯ ಅಧ್ಯಾಯದಲ್ಲಿ ಹೇಳಿದ ತ್ರಿಗುಣ ಭೇದಗಳ ಹೊರ್ತು ಮತ್ತೆ ಕೆಲವು ಭೇದಗಳು ಇಲ್ಲಿ ಹೇಳಲ್ಪಟ್ಟಿವೆ. ಅವು ಹೀಗೆ:

ಜ್ಞಾನದಲ್ಲಿ ತ್ರಿವಿಧ. (೧) ಸರ್ವಪ್ರಾಣಿಗಳಲ್ಲಿ ಒಬ್ಬ ಅವ್ಯಯನಾದ ಪರಮಾತ್ಮನನ್ನು, ಆತನು ವಿಭಕ್ತವಾಗಿ ತೋರುವ ಯಾವತ್ತು ಪದಾರ್ಥಗಳಲ್ಲಿ ಅವಿಭಕ್ತನಾಗಿರುತ್ತಾನೆಂಬುದಾಗಿ ತಿಳಿಯುವ ಜ್ಞಾನವು ಸಾತ್ವಿಕವು. ಭಿನ್ನ ಭಿನ್ನ ಪದಾರ್ಥಗಳೆಲ್ಲವೂ ಭಿನ್ನಭಿನ್ನವಾಗಿಯೇ ಇರುವವೆಂದು ತಿಳಿಯುವ ಜ್ಞಾನವು ರಾಜಸವು. ಒಂದೇ ಕಾರ್ಯದಲ್ಲಿ ಅಂದರೆ ದೇಹಧಾರಿಯಾದ ಜೀವನಲ್ಲಿ ಯಾವತ್ತು ಜಗತ್ತು ಅಡಗಿದೆಯೆಂದೂ ಅದು ಅಹೇತುಕವಾಗಿದೆಯೆಂದೂ ಅಂದರೆ ಜಗತ್ತಿಗೆ ಯಾರೂ ಕರ್ತನಿಲ್ಲದೆ ತನ್ನಿಂದ ತಾನೇ ಹುಟ್ಟಿದೆಯೆಂದೂ ತಿಳಿಯುವ ಜ್ಞಾನವು ತತ್ವಕ್ಕೆ ವಿರುದ್ಧವಾದುದೂ ಕ್ಷುದ್ರವಾದುದೂ ಆಗಿರುತ್ತದೆ. ಅದು ತಾಮಸ ಜ್ಞಾನವು.

ಕರ್ಮದಲ್ಲಿಯ ತ್ರಿವಿಧ ಭೇದಗಳು: (೧) ನಿಯತವಾದುದೂ ಅಂದರೆ ಅವರವರಿಗೆ ಯೋಗ್ಯವಾದುದೂ (೨) ಸಂಗರಹಿತವಾದುದೂ ಅಂದರೆ ಅನಾಸಕ್ತವಾದುದೂ (೩) ರಾಗದ್ವೇಷಗಳಿಂದ ವಿರಹಿತವಾದುದೂ (೪) ಫಲಾಪೇಕ್ಷೆಯಿಲ್ಲದೆ ಮಾಡಲ್ಪಟ್ಟುದೂ ಆದ ಕರ್ಮವು ಸಾತ್ವಿಕಕರ್ಮವು. (೧) ಕಾಮೇಚ್ಛೆಯಿಂದಲೂ (೨) ಅಹಂಕಾರದಿಂದಲೂ (೩) ಆಯಾಸಯುಕ್ತವಾಗಿಯೂ ಮಾಡಲ್ಪಟ್ಟ ಕರ್ಮವು ರಾಜಸವು. (೧) ಮತ್ತೊಂದು ಕರ್ಮಕ್ಕಿರುವ ಸಂಬಂಧವನ್ನು ಲಕ್ಷಿಸದೆ (೨) ನಾಶವನ್ನೂ ಹಿಂಸೆಯನ್ನೂ ಪೌರುಷವನ್ನೂ ಅಪೇಕ್ಷಿಸಿ ಮೋಹದಿಂದ ಮಾಡಲ್ಪಡುವ ಕರ್ಮವು ತಾಮಸವು.

ಕರ್ಮದಲ್ಲಿಯ ತ್ರಿವಿಧಭೇದಗಳು (೧) ಮುಕ್ತ ಸಂಗನೂ (೨) ಅಹಂಕಾರವಿಲ್ಲದವನೂ (೩) ಧೈರ್ಯ ಉತ್ಸಾಹಗಳಿಂದ ಯುಕ್ತನಾದವನೂ (೪) ಸಿದ್ಧಿ ಅಸಿದ್ಧಿ ಇವುಗಳಲ್ಲಿ ಸಮಬುದ್ಧಿಯುಳ್ಳವನೂ (೫) ನಿರ್ವಿಕಾರಿಯೂ ಆಗಿರುವ ಕರ್ತನು ಸಾತ್ವಿಕನು. (೧) ರಾಗಯುಕ್ತನೂ (೨) ಕರ್ಮಫಲಾಪೇಕ್ಷೆಯುಳ್ಳವನೂ (೩) ಲೋಭಿಯೂ (೪) ಹಿಂಸಾತ್ಮಕನೂ (೫) ಅಶುಚಿಯೂ (೬) ಹರ್ಷಶೋಕಾದಿಗಳಿಂದ ಕೂಡಿದವನೂ ಆದ ಕರ್ತನು ರಾಜಸನು. ಮತ್ತು (೧) ಈಶ್ವರಾರ್ಪಣ ಬುದ್ಧಿಯಿಲ್ಲದವನೂ (೨) ಪ್ರಾಕೃತನು ಅಂದರೆ ಭಗವದ್ಭಕ್ತಿಯೆಂಬ

ಸಂಸ್ಕಾರರಹಿತನಾದವನು (೩) ನಮ್ರತೆಯಿಲ್ಲದವನು (೪) ಗೂಢ ದ್ವೇಷದಿಂದ ಕೂಡಿದವನು (೫) ನೀಚಕೃತ್ಯವನ್ನು ಮಾಡುವವನು (೬) ಸೋಮಾರಿಯು (೭) ವಿಷಾದದಿಂದ ತುಂಬಿದ ಮನಸ್ಸುಳ್ಳವನು (೮) ದೀರ್ಘದ್ವೇಷಿ ಈ ದುರ್ಗುಣಗಳುಳ್ಳ ಕರ್ತನು ತಾಮಸನು.

ಬುದ್ಧಿಯಲ್ಲಿರುವ ತ್ರಿವಿಧಭೇದಗಳು, (೧) ಯಾವ ಬುದ್ಧಿಗೆ ಪ್ರವೃತ್ತಿ ನಿವೃತ್ತಿ ಇವೆರಡೂ ಸಮವೋ (೨) ಯಾವುದು ಕಾರ್ಯವಾವುದು ಅಕಾರ್ಯವಾವುದು ಎಂಬುದನ್ನು ಕಂಡುಹಿಡಿಯಬಲ್ಲದೋ (೩) ಯಾವುದಕ್ಕೆ ಭಯವಾವುದು ಅಭಯವಾವುದು ಎಂಬುದನ್ನರಿಯುವ ಶಕ್ತಿಯಿರುತ್ತದೆಯೋ (೪) ಯಾವುದಕ್ಕೆ ಬಂಧವೆಂದರೇನು ಮೋಕ್ಷವೆಂದರೇನು ಎಂಬುದು ತಿಳಿಯುತ್ತದೆಯೋ ಆ ಬುದ್ಧಿಯು ಸಾತ್ವಿಕವು. (೧) ಯಾವ ಬುದ್ಧಿಗೆ ಧರ್ಮಾಧರ್ಮಗಳು (೨) ಕಾರ್ಯಾಕಾರ್ಯಗಳು ಯಥಾಸ್ಥಿತವಾಗಿ ಅಂದರೆ ಸರಿಯಾಗಿ ತಿಳಿಯುವುದಿಲ್ಲವೋ ಅದು ರಾಜಸಬುದ್ಧಿಯು, ಮತ್ತು (೧) ಯಾವ ಬುದ್ಧಿಗೆ ಧರ್ಮವು ಅಧರ್ಮವಾಗಿಯೂ (೨) ಅಧರ್ಮವು ಧರ್ಮವಾಗಿಯೂ ತೋರುತ್ತದೆಯೋ (೩) ಮತ್ತು ಯಾವತ್ತು ವಿಷಯಗಳನ್ನು ವಿಪರೀತವಾಗಿಯೇ ತಿಳಿಯುತ್ತದೆಯೋ ಅಂಥ ವಿಪರೀತಜ್ಞಾನದಿಂದ ಮುಚ್ಚಲ್ಪಟ್ಟ ಬುದ್ಧಿಯು ತಾಮಸವು.

ಧೃತಿ ಅಥವಾ ಧೈರ್ಯದಲ್ಲಿಯೂ ಮೂರು ವಿಧ. (೧) ಯಾವ ಧೈರ್ಯದಿಂದ ಮನಸ್ಸು ಪ್ರಾಣ ಮತ್ತು ಇಂದ್ರಿಯ ಇವುಗಳ ಕ್ರಿಯೆಗಳು ಅವ್ಯಭಿಚಾರಿಯಾದ ಭಕ್ತಿಯೋಗದಿಂದ ಮಾಡಲ್ಪಡುತ್ತವೆಯೋ ಆ ಧೈರ್ಯವು ಸಾತ್ವಿಕಧೈರ್ಯವು (೨) ಯಾವ ಧೈರ್ಯದಿಂದ ಧರ್ಮ-ಅರ್ಥ-ಕಾಮಗಳನ್ನು ಎಡೆಬಿಡದೆ ಇಚ್ಛಿಸುತ್ತಾನೋ (೨) ಯಾವ ಧೈರ್ಯದಿಂದ ಕರ್ಮಫಲದಲ್ಲಿ ವಿಶೇಷವಾಗಿ ಸಂಗವನ್ನಿಡುತ್ತಾನೋ (೩) ಮತ್ತು ಕರ್ಮಫಲಗಳನ್ನು ಆಕಾಂಕ್ಷಿಸುತ್ತಾನೋ ಆ ಧೈರ್ಯವು ರಾಜಸಧೈರ್ಯವು, ಮತ್ತು (೩) ದುರ್ಬುದ್ಧಿಯು ಯಾವ ಧೈರ್ಯದಿಂದ (೧) ಅತಿ ನಿದ್ದೆಯನ್ನು ಮಾಡುತ್ತಾನೋ (೨) ಭಯಕ್ಕೆ ಗಟ್ಟಿಯಾಗಿ ಅಂಟಿಕೊಳ್ಳುತ್ತಾನೋ (೩) ಶೋಕದಲ್ಲಿ ಮಗ್ನನಾಗುತ್ತಾನೋ (೪) ವಿಷಾದವನ್ನು ತಾಳುತ್ತಾನೋ (೫) ಮತ್ತು ಸೊಕ್ಕಿನವನಾಗಿರುತ್ತಾನೋ ಅಂಥ ಧೈರ್ಯವು ತಾಮಸಧೈರ್ಯವು.

ಸುಖದಲ್ಲಿಯೂ ಮೂರು ವಿಧ. (೧) ಯಾವ ಸುಖದಲ್ಲಿ ಅಭ್ಯಾಸದಿಂದ ಆನಂದವು ಹೆಚ್ಚಾಗುತ್ತದೆಯೋ (೨) ಮತ್ತು ಯಾವ ಸುಖದಲ್ಲಿ ದುಃಖದ ನಾಶವು ಪೂರ್ಣವಾಗಿ ಆಗುತ್ತದೆಯೋ (೩) ಯಾವ ಸುಖವು ಮುಂಚೆ ವಿಷದಂತಿದ್ದರೂ ಕೊನೆಗೆ ಅಮೃತದಂತೆ ಅತ್ಯಂತ ಸುಖದಾಯಕವಾಗಿ ಪರಿಣಮಿಸುತ್ತದೆಯೋ ಅದು ಸಾತ್ವಿಕ ಸುಖವು. ಅದು ಮನಸ್ಸಿಗೂ ಬುದ್ಧಿಗೂ ಪ್ರಸನ್ನತೆಯನ್ನು ಉಂಟುಮಾಡುವಂಥದು. (೨) ವಿಷಯೇಂದ್ರಿಯಗಳ

ಸಂಯೋಗದಿಂದುಂಟಾಗುವ ಯಾವ ಸುಖವು ಮುಂಚೆ ಅಮೃತದಂತೆ ಇದ್ದು ಮುಂದೆ ವಿಷಮಯವಾಗುತ್ತದೆಯೋ ಅದು ರಾಜಸ ಸುಖವು ಮತ್ತು ಯಾವ ಸುಖವು ಮುಂಚೆಯೂ ಮುಂದೆಯೂ ಕೂಡಿಯೇ ಮನುಷ್ಯನಿಗೆ ಮೋಹವನ್ನುಂಟುಮಾಡುತ್ತದೆಯೋ ಮತ್ತು ಯಾವುದು ನಿದ್ರೆ ಆಲಸ್ಯ ಪ್ರಮಾದ ಮುಂತಾದವುಗಳನ್ನು ಹುಟ್ಟಿಸುತ್ತದೆಯೋ ಅದು ತಾಮಸಸುಖವು.

ಒಟ್ಟಿಗೆ, ಮೂರುಲೋಕಗಳಲ್ಲಿ ಈ ಮೂರು ಗುಣಗಳಿಂದ ಕೂಡದೆ ಇದ್ದ ಪದಾರ್ಥವು ಒಂದೂ ಇಲ್ಲ.

ಚಾತುರ್ವರ್ಣ್ಯವೂ ಈ ಮೂರು ಗುಣಗಳ ಆಧಾರದ ಮೇಲೆಯೇ ನಿರ್ಮಾಣವಾಗಿದೆ. ಬ್ರಾಹ್ಮಣ, ಕ್ಷತ್ರಿಯ ವೈಶ್ಯ ಮತ್ತು ಶೂದ್ರ ವರ್ಣಗಳ ಕರ್ಮಗಳು ಕೂಡ ಅವರವರ ಸ್ವಭಾವಕ್ಕನುಸಾರವಾದ ಈ ಮೂರು ಗುಣಗಳ ಆಧಾರದಿಂದಲೇ ವಿಭಾಗಿಸಲ್ಪಟ್ಟಿವೆ. (೧) ಶಮ ಅಂದರೆ ಭಗವನ್ನಿಷ್ಠ ಬುದ್ಧಿ (೨) ದಮ ಅಂದರೆ ಇಂದ್ರಿಯನಿಗ್ರಹ (೩) ತಪ ಅಂದರೆ ಬ್ರಹ್ಮಚರ್ಯಾದಿ ತಪಸ್ಸು (೪) ಬಾಹ್ಯಾಂತರಶುದ್ಧಿ (೫) ಕ್ಷಮೆ (೬) ಆರ್ಜವ ಅಂದರೆ ಸರಳತನ (೭) ಜ್ಞಾನ (೮) ವಿಜ್ಞಾನ (೯) ಆಸ್ತಿಕ್ಯಬುದ್ಧಿ ಇವು ಬ್ರಾಹ್ಮಣರಿಗೆ ಸ್ವಭಾವಸಿದ್ಧವಾದ ಕರ್ಮಗಳು. (೧) ಶೌರ್ಯ (೨) ತೇಜ (೩) ಧೈರ್ಯ (೪) ಸಾಮರ್ಥ್ಯ (೨) ಯುದ್ಧದಲ್ಲಿ ಹೆದರದೆ ಓಡದಿರುವುದು (೬) ದಾನ (೭) ಈಶ್ವರ ಭಾವ ಅಂದರೆ ಅಧಿಕಾರನಡಿಸುವುದು ಇವು ಕ್ಷತ್ರಿಯ ಸ್ವಭಾವ ಸಿದ್ಧವಾದ ಕರ್ಮಗಳು. (೧) ಒಕ್ಕಲತನ (೨) ಗೋರಕ್ಷಣ (೩) ವ್ಯಾಪಾರ ಇವು ವೈಶ್ಯರಿಗೆ ಸ್ವಭಾವಸಿದ್ಧವಾದ ಕರ್ಮಗಳು. (೪) ಶೂದ್ರರಿಗೆ ಸ್ವಭಾವಸಿದ್ಧವಾದ ಕರ್ಮಗಳೆಂದರೆ ಪರಿಚರ್ಯಾತ್ಮಕವಾದ ಅಂದರೆ ಸೇವಾರೂಪವಾದ ಕರ್ಮಗಳು, ಈ ಕರ್ಮಗಳು ಕೂಡ ಅವರವರಲ್ಲಿರುವ ಸಾತ್ವಿಕಾದಿ ಗುಣಗಳ ಮೇಲಿಂದಲೇ ನಿರ್ಣಯಿಸಲ್ಪಟ್ಟಿವೆ. ಬ್ರಾಹ್ಮಣರಲ್ಲಿ ಸಾತ್ವಿಕ ಗುಣವು ಬಹಳೇ ಇರುತ್ತದೆ. ಕ್ಷತ್ರಿಯರಲ್ಲಿ ರಜಸ್ಸು ಇರುತ್ತದೆ. ಆದರೆ ಅವರಲ್ಲಿಯೂ ಸತ್ವವು ರಜಕ್ಕಿಂತ ಸ್ವಲ್ಪ ಹೆಚ್ಚೇ ಇರುತ್ತದೆ. ವೈಶ್ಯರಲ್ಲಿ ರಜಸ್ಸು ಮತ್ತು ಸತ್ವ ಇವೆರಡೂ ಸಮವಾಗಿ ಇರುತ್ತವೆ. ಶೂದ್ರರಲ್ಲಿ ತಮಸ್ಸಿಗಿಂತ ಸತ್ವವು ಕಡಿಮೆ, ಆದರೆ ಅವರಲ್ಲಿಯೂ ತಮಸ್ಸಿಗಿಂತ ರಜೋಗುಣವು ಹೆಚ್ಚಿಗೆ ಇರುತ್ತದೆ. ಈಬಗೆಯಾಗಿ ಅವರವರಲ್ಲಿರುವ ಮೂಲ ಸಾತ್ವಿಕಾದಿ ಗುಣಗಳ ಮೇಲೆಯೇ ಈ ಚಾತುರ್ವಣ್ಯ ವಿಭಾಗವು ರಚಿಸಲ್ಪಟ್ಟಿರುತ್ತದೆ.

೨೪ನೆಯ ಪ್ರಕರಣ

( ೧೮ನೆಯದ ತಾತ್ಪರ್ಯ ಮುಗಿದದು )

# ಉಪಸಂಹಾರ

ಇಲ್ಲಿಯವರೆಗೆ ಮಾಡಲ್ಪಟ್ಟ ಗೀತೋಪದೇಶದ ಉಪಸಂಹಾರವು ೧೮ನೆಯ ಅಧ್ಯಾಯದ ಕೊನೆಗೆ ಬಂದಿದೆ. ಈ ಉಪಸಂಹಾರದಲ್ಲಿ ಯಾವತ್ತು ಗೀತೋಪದೇಶದ ಸಾರವು ಸ್ವಲ್ಪದರಲ್ಲಿ ಬಂದಿದೆ.

ಉಪಕ್ರಮಕ್ಕಿಂತಲೂ ಉಪಸಂಹಾರವು ಹೆಚ್ಚಿಗೆ ಮಹತ್ವದ್ದಿರುತ್ತದೆ. ಉಪಕ್ರಮದಲ್ಲಿ ಇಂಥ ವಿಷಯವು ಚರ್ಚಿಸಲ್ಪಡುತ್ತದೆಂದು ಪ್ರಸ್ತಾವನೆ ಇರುತ್ತದೆ. ಮುಂದೆ, ಆ ವಿಷಯವು ಚರ್ಚಿಸಲ್ಪಡುವಾಗ ಅನೇಕ ವಿಚಾರಗಳ ಮಥನವಾಗಿ ಕೊನೆಗೆ ಅದರ ಬೆಣ್ಣೆಯು ಉಪ ಸಂಹಾರದಲ್ಲಿ ಇಡಲ್ಪಟ್ಟಿರುತ್ತದೆ. ಆದುದರಿಂದ, ಹೀಗೆ ಇಲ್ಲಿಯವರೆಗೆ ಮಥನಮಾಡಲ್ಪಟ್ಟು ತೆಗೆದಿರುವ ಬೆಣ್ಣೆಯು ಯಾವುದೆಂಬುದನ್ನು ಇಲ್ಲಿ ಹೇಳುತ್ತೇವೆ.

ಗೀತೆಯ ಉಪಕ್ರಮವಾದುದು ಅರ್ಜುನನು ಸತ್ತವರ ಸಲುವಾಗಿ ಅಳತಕ್ಕದ್ದಲ್ಲವೆಂಬುದರಿಂದ, ಅದಕ್ಕೆ ಅನೇಕಕಾರಣಗಳು ೨ನೆಯ ಅಧ್ಯಾಯದಲ್ಲಿ ಕೊಡಲ್ಪಟ್ಟಿವೆ. ಅವುಗಳಲ್ಲಿ ಜೀವರುಗಳು ಅನಾದಿ ನಿತ್ಯರಾದಕಾರಣ ಅವರ ವಿಷಯವಾಗಿ ಶೋಕಿಸಬಾರದೆಂಬುದೇ ಮುಖ್ಯವಾದುದು. ಅರ್ಜುನನು ಏಕೆ ಯುದ್ಧ ಮಾಡಬೇಕೆಂಬುದಕ್ಕೆ ಇದೇ ಮುಖ್ಯ ಕಾರಣವು. ಹಾಗೆಯೇ ಸ್ವಧರ್ಮವನ್ನು ಲಕ್ಷದಲ್ಲಿ ತಂದರೂ ಯುದ್ಧವನ್ನು ಮಾಡಲೇಬೇಕಾಗುವುದು ಎಂಬುದು ಎರಡನೆಯ ಕಾರಣವು. ಮೂರನೆಯ ಕಾರಣವು ಕೀರ್ತಿಭಂಗದ ಕಾರಣವು. ಅದು ಅಷ್ಟು ಮಹತ್ವದ ಕಾರಣವಲ್ಲ. ಮೊದಲಿನವೆರಡೇ ಮುಖ್ಯ ಕಾರಣಗಳು. ಅವೇ ಕಾರಣಗಳನ್ನು ಶ್ರೀಕೃಷ್ಣನು ತನ್ನ ಉಪಸಂಹಾರದಲ್ಲಿ ಹೆಚ್ಚಿಗೆ ಸ್ಪಷ್ಟವಾಗಿ ಕೊಟ್ಟಿರುವನು. ತಮ್ಮ ತಮ್ಮ ಕರ್ಮದಲ್ಲಿ ಅಭಿರತನಾದವನು ಮೋಕ್ಷವನ್ನು ಹೊಂದುತ್ತಾನೆ ಎಂಬುದೇ ಇಲ್ಲಿ ಹೇಳಿರುವ ಮುಖ್ಯ ಸಿದ್ಧಾಂತ. ಸ್ವಕರ್ಮನಿರತನಾದವನು ಹೀಗೆ ಮುಕ್ತಿಯನ್ನು ಏಕೆ ಹೊಂದುತ್ತಾನೆಂಬುದು ಮುಂದೆ ಈ ರೀತಿಯಾಗಿ ಹೇಳಲ್ಪಟ್ಟಿದೆ. ಯಾವ ಪರಮಾತ್ಮನಿಂದ ಇದೆಲ್ಲ ಜಗತ್ತು ಉತ್ಪನ್ನವಾಗಿರುವುದೋ ಮತ್ತು ಯಾವ ಪರಮಾತ್ಮನಿಂದ ಈ ಚರಾಚರ ಪ್ರಪಂಚವೆಲ್ಲವೂ ವ್ಯಾಪ್ತವಾಗಿರುವುದೋ ಆ ಪರಮಾತ್ಮನನ್ನು ಸ್ವಕರ್ಮದ ಮೂಲಕವಾಗಿ ಚೆನ್ನಾಗಿ ಪೂಜಿಸಿದರೆ ಮಾನವನು ಮೋಕ್ಷವನ್ನು ಪಡೆಯುತ್ತಾನೆ. ಅಂದರೆ ವಿಹಿತಕರ್ಮಗಳಿಂದ ಪರಮಾತ್ಮನನ್ನು

ಪೂಜಿಸಿದ್ದರಿಂದ ಅಂತಃಕರಣಶುದ್ಧಿಯಾಗಿ ಶ್ರವಣಮನನಧ್ಯಾನ ಅಪರೋಕ್ಷಜ್ಞಾನ ಇವುಗಳಿಂದ ಆತನು ಕೊನೆಗೆ ಮುಕ್ತಿಯನ್ನು ಹೊಂದುತ್ತಾನೆ. ಸ್ವಧರ್ಮವು ವಿಗುಣವಾಗಿದ್ದರೂ ವಿಹಿತವು. ಪರಧರ್ಮವು ಯಾವಾಗಲೂ ಭಯಾವಹವು. ಸ್ವಧರ್ಮವೆಂದರೆ ಸ್ವಭಾವನಿಯತವಾದ ಕರ್ಮ. ಅದನ್ನು ಮಾಡಿದರೆ ಪಾಪವು ತಗಲುವುದಿಲ್ಲ. ಆದಕಾರಣ, ತನ್ನ ಸಹಜ ಕರ್ಮವು ದೋಷವುಳ್ಳದ್ದಾಗಿದ್ದರೂ ಮನುಷ್ಯನು ಅದನ್ನು ಬಿಡಕೂಡದು. ಏಕೆಂದರೆ ಯಾವತ್ತು ಕರ್ಮಗಳು ಪ್ರಾರಂಭದಲ್ಲಿ ಬೆಂಕಿಯು ಮುಂಚೆ ಹೊಗೆಯಿಂದ ಮುಸುಕಲ್ಪಟ್ಟಂತೆ, ದೋಷದಿಂದ ಮುಚ್ಚಿರುತ್ತವೆ. ಅಂದರೆ, ಸಹಜಕರ್ಮದ ಪರಿಣಾಮಗಳು ಒಮ್ಮೆಲೆ ಗೊತ್ತಾಗುವುದಿಲ್ಲ. ಮೊದಲು ಮೊದಲು ಅವು ಕೆಟ್ಟ ಪರಿಣಾಮಗಳುಳ್ಳವುಗಳಂತೆ ತೋರಿದರೂ ಕೊನೆಗೆ ಅವುಗಳಿಂದ ಹಿತಕಾರಕ ಪರಿಣಾಮಗಳೇ ಆಗುತ್ತಿರುತ್ತವೆ. ವಿಹಿತಕರ್ಮಗಳನ್ನು ಮಾಡುವವನು ಸಂನ್ಯಾಸದ ಮೂಲಕ ನೈಷ್ಕರ್ಮ್ಯ ಸಿದ್ಧಿಯನ್ನು ಪಡೆಯುತ್ತಾನೆ. ಆತನು ಸರ್ವತ್ರದಲ್ಲಿಯೂ ಅಸಕ್ತ ಬುದ್ಧಿಯುಳ್ಳವನಾಗಿರುತ್ತಾನೆ, ಜಿತೇಂದ್ರಿಯನಾಗಿರುತ್ತಾನೆ, ಮತ್ತು ಸ್ಪೃಹೆಯನ್ನು ತೊರೆದವನಾಗಿರುತ್ತಾನೆ. ಸಂನ್ಯಾಸವೆಂದರೆ ಇದೇ. ಇವುಗಳ ಮೂಲಕವೇ ಆತನಿಗೆ ನೈಷ್ಕರ್ಮ್ಯಸಿದ್ಧಿಯು ಪ್ರಾಪ್ತವಾಗುತ್ತದೆ. ನೈಷ್ಕರ್ಮ್ಯಸಿದ್ಧಿಯೆಂದರೆ ಸಂಪೂರ್ಣ ಮೋಕ್ಷೋಪಾಯಸಿದ್ಧಿ ಅಥವಾ ಪ್ರಾರಬ್ಧವನ್ನು ಬಿಟ್ಟು ಮಿಕ್ಕ ಯಾವತ್ತು ಕರ್ಮಗಳಿಂದ ಉಂಟಾಗುವ ದೋಷಗಳ ನಾಶರೂಪ ಸಿದ್ಧಿ. ವಿಹಿತಕರ್ಮಮಾಡುವವನು ಈ ಪ್ರಕಾರವಾಗಿ ಯಾವತ್ತು ಕರ್ಮಗಳನ್ನು ನಾಶಮಾಡಿಕೊಂಡು ಅಂದರೆ ನೈಷ್ಕರ್ಮ್ಯಸಿದ್ಧಿಯನ್ನು ಪಡೆದ ಅನಂತರದಲ್ಲಿ ಮೋಕ್ಷವನ್ನು ಪಡೆಯುತ್ತಾನೆ. ಈ ನೈಷ್ಕರ್ಮ್ಯಸಿದ್ಧಿಯೆಂಬುದು ಜ್ಞಾನದ ಪರಮಾವಧಿ ಸ್ಥಿತಿಯು.

ವಿಹಿತಕರ್ಮಮಾಡುವವನು ನೈಷ್ಕರ್ಮ್ಯಸಿದ್ಧಿಯನ್ನು ಹೊಂದಿದಾಗ ವಿಶುದ್ಧವಾದ ಬುದ್ಧಿಯುಳ್ಳವನಾಗುತ್ತಾನೆ. ಆಗ ಆತನು ಧೈರ್ಯದಿಂದ ತನ್ನ ಮನಸ್ಸನ್ನು ನಿಗ್ರಹಿಸಿಕೊಳ್ಳುತ್ತಾನೆ, ಶಬ್ದಾದಿ ವಿಷಯಗಳನ್ನು ಹೊರದೂಡುತ್ತಾನೆ, ರಾಗದ್ವೇಷಗಳನ್ನು ಬಿಟ್ಟು ಕೊಡುತ್ತಾನೆ; ಆತನು ಏಕಾಂತವಾಸವನ್ನು ಕೈಕೊಂಡು, ಅಲ್ಪಾಹಾರವನ್ನು ಸೇವಿಸುತ್ತ, ವಾಕ್, ಕಾಯ ಮತ್ತು ಮನಸ್ಸು ಇವುಗಳನ್ನು ನಿಯಮನಮಾಡಿಕೊಂಡು ಧ್ಯಾನಯೋಗಪರನಾಗಿ ನಿತ್ಯದಲ್ಲಿಯೂ ವೈರಾಗ್ಯವನ್ನು ತಾಳಿರುತ್ತಾನೆ, ಆತನು ಅಹಂಕಾರ, ಬಲ, ದರ್ಪ, ಕಾಮ, ಕ್ರೋಧ, ಪರಿಗ್ರಹವೆಂದರೆ ಆ ಅಭಿಮಾನ ಇವುಗಳನ್ನು ತೊರೆದು ನಿರ್ಮಮನಾಗಿಯೂ ಶಾಂತನಾಗಿಯೂ ಇದ್ದುಕೊಂಡಾಗ ಬ್ರಹ್ಮನಲ್ಲಿ ಸದಾ ಮನಸ್ಸನ್ನಿಡುವುದಕ್ಕೆ ಸಮರ್ಥನಾಗುತ್ತಾನೆ. ಅಥವಾ ಇಂಥವರಿಗೆ ಮುಂಚೆ ಬ್ರಹ್ಮಳು ಅಂದರೆ ಮಹಾಲಕ್ಷ್ಮಿಯು ಪ್ರಾಪ್ತಳಾಗಿ ಮುಂದೆ ಅವರಿಗೆ ಪರಮಾತ್ಮನಲ್ಲಿ ಭಕ್ತಿ ಹೆಚ್ಚಾಗಿ ಪರಮಾತ್ಮ

ಪ್ರಾಪ್ತಿಯಾಗುತ್ತದೆಂದೂ ಹೇಳಬಹುದು. ಹೀಗೆ ಬ್ರಹ್ಮಭೂತನಾದಾಗ ಅಂದರೆ ಬ್ರಹ್ಮನಲ್ಲಿ ಸದಾ ಮನಸ್ಸಿಡುವುದಕ್ಕೆ ಸಮರ್ಥನಾದಾಗ ಆತನಿಗೆ ಶೋಕ ಆಕಾಂಕ್ಷೆಗಳಾವವೂ ಉಳಿಯುವುದಿಲ್ಲ; ಸರ್ವಪ್ರಾಣಿಗಳಲ್ಲಿ ಆತನು ಸಮಬುದ್ಧಿಯುಳ್ಳವನಾಗುತ್ತಾನೆ. ಇಷ್ಟಾದ ಬಳಿಕ ಆತನಿಗೆ ಪರಮಾತ್ಮನಲ್ಲಿ ನಿಜವಾದ ಭಕ್ತಿಯು ಉತ್ಪನ್ನವಾಗುತ್ತದೆ. ಆ ಭಕ್ತಿಯ ಮೂಲಕ ಪರಮಾತ್ಮನು ಯಾರು, ಆತನ ಪ್ರಭಾವವು ಎಷ್ಟು, ಎಂಬುದು ಆತನಿಗೆ ಗೊತ್ತಾಗುತ್ತದೆ. ಹೀಗೆ ಪರಮಾತ್ಮನನ್ನು ತತ್ತ್ವತಃ ತಿಳಿದವನಾಗಿ ಅನಂತರ ಆತನು ಪರಮಾತ್ಮನಲ್ಲಿ ಪ್ರವೇಶಿಸುತ್ತಾನೆ. ಅದೇ ಮುಕ್ತಿ. ಅಥವಾ ಪರಬ್ರಹ್ಮಪ್ರಾಪ್ತಿ.

ಈ ಪ್ರಕಾರವಾಗಿ ವಿಹಿತಕರ್ಮಾನುಷ್ಠಾನಮಾಡುವುದರಿಂದ ಪರಬ್ರಹ್ಮಪ್ರಾಪ್ತಿಯು ಹೇಗೆ ಆಗುತ್ತದೆಂಬುದನ್ನು ಹೀಗೆ ಸ್ಪಷ್ಟವಾಗಿ ವಿವೇಚಿಸಿದ್ದಾಯಿತು. ಇನ್ನು ಕೊನೆಗೆ ಮುಕ್ತಿಗೆ ಅವಶ್ಯವಿರುವ ಮುಖ್ಯ ಸಾಧನವನ್ನು ಪುನಃ ಹೇಳಿ ಗೀತೋಪದೇಶದ ಉಪಸಂಹಾರವು ಮಾಡಲ್ಪಟ್ಟಿದೆ.

## ಕರ್ಮಾನುಷ್ಠಾನದಿಂದ ಉಂಟಾಗತಕ್ಕ ಅಂತರಂಗ

ಒಟ್ಟಿಗೆ ಕೊನೆಗೆ ಹೇಳುವುದೇನೆಂದರೆ- ಸರ್ವ ಕರ್ಮಗಳನ್ನು ಪರಮಾತ್ಮನೇ ಆಶ್ರಯನೆಂಬ ಭಾವನೆಯಿಂದಲೇ ಮಾಡಬೇಕು. ಅಂದರೆ ಪರಮಾತ್ಮನ ಪ್ರಸಾದವು ಉಂಟಾಗುತ್ತದೆ ಮತ್ತು ಆಗ ಮನುಷ್ಯನಿಗೆ ಶಾಶ್ವತವಾದ ಪದವು ಲಭಿಸುತ್ತದೆ. ಆದಕಾರಣ, ಸರ್ವಕರ್ಮಗಳನ್ನೂ ಮನಸ್ಸಿನಿಂದ ಭಗವಂತನಿಗೆ ಸಮರ್ಪಿಸಿ, ಆತನೇ ಸರ್ವೋತ್ತಮನೆಂದು ಭಾವಿಸಿ ಬುದ್ಧಿಯೋಗವನ್ನು ಅವಲಂಬಿಸಿ ಅಂದರೆ ವಿಷಯಗಳಿಂದ ಬುದ್ಧಿಯನ್ನು ಪ್ರತ್ಯಾಹಾರದ ಮೂಲಕ ಹಿಡಿದೆಳೆದು ಚಿತ್ತವನ್ನು ಪರಮಾತ್ಮನಲ್ಲಿ ಇರಿಸಬೇಕು. ಇವೇ ಕರ್ಮಯೋಗ ಧ್ಯಾನಯೋಗಗಳು, ಹೀಗೆ ಪರಮಾತ್ಮನಲ್ಲಿ ಚಿತ್ತವನ್ನು ನಿಲ್ಲಿಸುವುದರಿಂದ ಸರ್ವಸಂಕಟಗಳನ್ನೂ ಆತನ ಪ್ರಸಾದದ ಮೂಲಕ ಸಹಜವಾಗಿ ದಾಟಬಲ್ಲನು.

ಅರ್ಜುನನಿಗೆ ಶ್ರೀಕೃಷ್ಣನು ಇಲ್ಲಿ ಎಚ್ಚರಿಕೆಯನ್ನು ಕೊಡುವುದೇನೆಂದರೆ ಅಹಂಕಾರದಿಂದ ನಾನು ಹೇಳಿದುದನ್ನು ಕೇಳದಿದ್ದರೆ ಹಾಳಾಗುವಿ. ಈ ಅಹಂಕಾರದ ಮೂಲಕವೇ ನೀನು ಯುದ್ಧ ಮಾಡುವುದಿಲ್ಲವೆನ್ನುತ್ತಿರುವಿ. ಆದರೆ ಎಚ್ಚರಿಕೆ ನಿನ್ನೀ ನಿಶ್ಚಯವು ವ್ಯರ್ಥ. ಏಕೆಂದರೆ ನಿನ್ನ ಸ್ವಭಾವವು ನಿನ್ನನ್ನು ಯುದ್ಧಕ್ಕೆ ಪ್ರೇರಿಸಿಯೇ ಪ್ರೇರಿಸುತ್ತದೆ. ಅಥವಾ ಭಗವದಿಚ್ಛೆಯು ನಿನ್ನನ್ನು ಯುದ್ಧಕ್ಕೆ ಪ್ರೇರಿಸುತ್ತಿರುವದು. ನೀನು ನಿನ್ನ ಸ್ವಭಾವಜ ಕರ್ಮದಿಂದ

ಬದ್ಧನಾಗಿರುವೆ. ಮೋಹದಿಂದ ಈಗ ಯಾವುದನ್ನು ಮಾಡುವುದಿಲ್ಲವೆಂದು ಎನ್ನುತ್ತಿರುವಿಯೋ ಅದನ್ನು ಅವಶ್ಯವಾಗಿಯಾದರೂ ಅಂದರೆ ಭಗವದಿಚ್ಛೆಗೆ ಅಧೀನನಾಗಿಯಾದರೂ ಮಾಡೇ ಮಾಡುವಿ. ಏಕೆಂದರೆ ಪ್ರತಿಯೊಬ್ಬನ ಹೃದಯಗುಹೆಯಲ್ಲಿ ಪರಮಾತ್ಮನು ವಾಸವಾಗಿದ್ದಾನೆ ಆತನು ತನ್ನ ಇಚ್ಛೆಯಿಂದ ಯಂತ್ರಾರೂಢರಾಗಿರುವ ಯಾವತ್ತು ಪ್ರಾಣಿಗಳನ್ನು ತಿರುಗಿಸುತ್ತಿರುವನು. ಆದಕಾರಣ, ಸರ್ವಭಾವದಿಂದಲೂ ಆತನಿಗೇನೇ ಶರಣು ಹೋಗು. ಆತನ ಪ್ರಸಾದದಿಂದ ಆಶಾಶ್ವತವಾದ ಶಾಂತಿಸ್ಥಾನವನ್ನು ಹೊಂದುವಿ.

**ತನ್ನಾಧೀನವಾಗಿರ್ದ ತ್ರಿಜಗದ ಸಚರಾಚರಂ**
**ಗಳೆಂಬ ಯಂತ್ರವನು ಯಂತ್ರವಾಹಕನಾಗಿ ಆಡಿಸುವನು**

ಇದೇ ಗುಹ್ಯತರವಾದ ಜ್ಞಾನವು. ಇನ್ನು ಗುಹ್ಯತಮವಾದ ಭಗವಂತನ ವಚನವನ್ನು ಕೇಳು. ಪರಮಾತ್ಮನಲ್ಲಿ ಮನಸ್ಸಿಡಬೇಕು, ಪರಮಾತ್ಮನ ಭಕ್ತನಾಗಬೇಕು. ಪರಮಾತ್ಮವಿಷಯಕ ಯಾಗಮಾಡಬೇಕು. ಪರಮಾತ್ಮನಿಗೆ ನಮಸ್ಕಾರಮಾಡಬೇಕು. ಇವೇ ಸಾಧನ ಸಾರವು. ಹೀಗೆ ಮಾಡಿದವರು ಪರಮಾತ್ಮನನ್ನೇ ಹೊಂದುತ್ತಾರೆ. ಇದು ಸತ್ಯ ಸತ್ಯ, ಸತ್ಯ. ಈ ಮೇಲ್ಕಾಣಿಸಿದ ನಾಲ್ಕು ಸಾಧನಗಳಲ್ಲದೆ ಮಿಕ್ಕ ಯಾವತ್ತು ಧರ್ಮಗಳನ್ನು ತ್ಯಜಿಸಬೇಕು. ಕೇವಲ ಪರಮಾತ್ಮನೊಬ್ಬನಿಗೇನೇ ಶರಣುಹೋಗಬೇಕು. ಅಂದರೆ ಆತನು ಮುಕ್ತಿಯನ್ನು ಕೊಡುತ್ತಾನೆ.

ಈ ಪ್ರಕಾರವಾಗಿ, ಪರಮಾತ್ಮನು ಯಾವತ್ತು ಗೀತೋಪದೇಶವನ್ನು ಇಲ್ಲಿ ಉಪಸಂಹಾರಮಾಡಿರುವನು. ಇದರ ಮೇಲಿಂದ ಸ್ವವಿಹಿತವೃತ್ತಿಯಿಂದಲೂ ಭಕ್ತಿಯಿಂದಲೂ ಭಗವದಾರಾಧನೆಮಾಡುವುದೇ ಪರಮಧರ್ಮವು ಎಂಬುದು ಸಿದ್ಧವಾಗುವುದಿಲ್ಲವೆ ?